KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಏಪ್ರಿಲ್ ೩, ೨೦೦೮ (ಚೈತ್ರ ೧೪, ಶಕ ವರ್ಷ ೧೯೨೯) | ಸಂಚಿಕೆ ೧೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಸಂಖ್ಯೆ: ಆಕುಕ 05 ಪಿಐಎಂ 2007, ಬೆಂಗಳೂರು, ದಿನಾಂಕ 14ನೇ ಡಿಸೆಂಬರ್ 2007**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ: ಆಕುಕ 05 ಪಿಐಎಂ 2007, ದಿನಾಂಕ 6–10–2007ರ ಪ್ರಸ್ತಾವನೆಯ 3ನೇ ಪ್ಯಾರಾ ಹಾಗೂ ಆದೇಶದ 2ನೇ ಪ್ಯಾರಾದಲ್ಲಿ "ಜಿಲ್ಲಾ ಪಂಚಾಯತ್ ಲೆಕ್ಕಶೀರ್ಷಿಕೆ 2210–04–101–1–71 ಯೋಜನೇತರ" ಎಂಬುದರ ಬದಲಾಗಿ "ಲೆಕ್ಕಶೀರ್ಷಿಕೆ 2210–04–101–1–72 ಯೋಜನೇತರ" ಎಂದು ಹಾಗೂ ಸದರಿ ಆದೇಶದ ಪ್ರಸ್ತಾವನೆಯು 3ನೇ ಪ್ಯಾರಾದ ನಂತರ ಕ್ರಮ ಸಂಖ್ಯೆ: 1ರಲ್ಲಿ "ಯಲವಳ್ಳಿ – ಕನಕಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ" ಎಂಬುದರ ಬದಲಾಗಿ "ಯಲವಳ್ಳಿ – ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 30

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ 2007–08ನೇ ಸಾಲಿನ ಅನುಮೋದಿತ ಕಾರ್ಯಕ್ರಮಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 46 ಸ್ವೀಮರ 2007, ದಿ: 27–4–2007.
2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ: ಎಸಿಟಿ: 1: 57: 2007–08, ದಿನಾಂಕ 2–2–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ 2007–08ನೇ ಸಾಲಿನ ಕ್ರಿಯಾ ಯೋಜನೆಗೆ ಅನುಮೋದನೆ ನೀಡಲಾಗಿದೆ. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಕ್ರಿಯಾಯೋಜನೆಯಲ್ಲಿನ

ಯೋಜನೆ ಮತ್ತು ಯೋಜನೇತರ ಲೆಕ್ಕಶೀರ್ಷಿಕೆಯಡಿ ಕೆಲವು ಕಾರ್ಯಕ್ರಮಗಳನ್ನು ತಾಂತ್ರಿಕ ಕಾರಣದಿಂದಾಗಿ ಪ್ರಸಕ್ತ ಸಾಲಿನ ಅಂತ್ಯದೊಳಗೆ ಕೈಗೊಳ್ಳಲು ಸಾಧ್ಯವಾಗುತ್ತಿಲ್ಲವಾದ ಕಾರಣ ಉಳಿತಾಯವನ್ನು ಅದೇ ಲೆಕ್ಕಶೀರ್ಷಿಕೆಯ ಅಡಿಯಲ್ಲಿ ಸಂರಕ್ಷಣಾ/ಅಭಿವೃದ್ಧಿ ಕಾರ್ಯಕ್ರಮಗಳಿಗೆ ಉಪಯೋಗಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಬೇಕೆಂದು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 42 ಕೆಎಂಯು 2008, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2008.**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ 2007–08ನೇ ಸಾಲಿನ ಅನುಮೋದಿತ ಕ್ರಿಯಾ ಯೋಜನೆಯ ಯೋಜನೆ ಮತ್ತು ಯೋಜನೇತರ ಶೀರ್ಷಿಕೆಗಳ ಕೆಳಕಂಡ ಕಲಂ (2)ರಲ್ಲಿನ ಕಾರ್ಯಕ್ರಮಗಳ ಬದಲಿಗೆ ಕಲಂ (4)ರಲ್ಲಿನ ಕಾರ್ಯಕ್ರಮಗಳನ್ನು ಅದೇ ಲೆಕ್ಕಶೀರ್ಷಿಕೆಗಳ ಅಡಿಯಲ್ಲಿ ಅನುಷ್ಠಾನಗೊಳಿಸಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಲೆಕ್ಕಶೀರ್ಷಿಕೆ ಹಾಗೂ ಅನುಮೋದನೆಗೊಂಡ ಕಾರ್ಯಕ್ರಮದ ವಿವರ | ಸಂಭವನೀಯ ಉಳಿತಾಯ (ಲಕ್ಷ ರೂ.) | ಪರಿಷ್ಕೃತ ಕಾರ್ಯಕ್ರಮದ ವಿವರ | ತಗಲುವ ಮೊತ್ತ (ಲಕ್ಷ ರೂ.) |
|---|---|---|---|---|
| 1 | 2 | 3 | 4 | 5 |
| **I** | **ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059 ಇತರೆ ಖರ್ಚು** | | | |
| | 1. ವಸ್ತು ಪ್ರದರ್ಶನ:<br>ಅ) ಮಂಗಳೂರು<br>ಆ) ಬೆಳಗಾವಿ | <br>0.50<br>0.50 | ಬಳ್ಳಾರಿ ಜಿಲ್ಲೆ ಹೊಸಪೇಟೆ ತಾ: ಕಮಲಾಪುರದಲ್ಲಿರುವ ಉಪ ನಿರ್ದೇಶಕರ ಕಛೇರಿ ಅಭಿವೃದ್ಧಿ ಮತ್ತು ಛಾಯಾಚಿತ್ರ ಪ್ರದರ್ಶನ ಶೆಡ್ ನಿರ್ಮಿಸುವ ಕುರಿತು | 5.71 |
| | 2. ಉತ್ಖನನ:<br>ಅ) ಇಕ್ಕೇರಿ ಕೋಟೆ<br>ಆ) ಸನ್ನತಿ | <br>1.00<br>1.00 | ಪಾರಂಪರಿಕ ಹಂಪಿ ನಡಿಗೆ ಕಾರ್ಯಕ್ರಮ<br>ಸಂಶೋಧನಾ ಪ್ರಕಟಣೆ:<br>ಧಾರವಾಡ ವಿಚಾರ ಸಂಕಿರಣ ಪ್ರಬಂಧಗಳು | 0.37<br><br>1.23 |
| | 3. ಸ್ಮಾರಕಗಳ ಸಂರಕ್ಷಣೆ:<br>ಈಶ್ವರ ದೇವಾಲಯದ ಆವರಣದ ಅಭಿವೃದ್ಧಿ ಮತ್ತು ಉದ್ಯಾನವನದ ನಿರ್ಮಾಣ ಕಳಸಾಪುರ, ಗದಗ ತಾ: ಗದಗ ಜಿಲ್ಲೆ | 3.00 | ಸ್ಮಾರಕಗಳ ಸಂರಕ್ಷಣೆ:<br>ಕೊಳ್ಳೇಗಾಲದ ಶ್ರೀ ನಾರಾಯಣಸ್ವಾಮಿ ದೇವಸ್ಥಾನ | 2.50 |
| | 4. ಹೊಸ ಘಟಕ:<br>ಹೊಸ ಹುದ್ದೆಗಳ ಸೃಜನೆ | 4.40 | ಬೆಂಗಳೂರು ವಿಭಾಗದ ಸ್ಮಾರಕಗಳಿಗೆ ನಾಮಫಲಕಗಳನ್ನು ಅಳವಡಿಸುವುದು. | 0.59 |
| | **ಒಟ್ಟು** | **10.40** | **ಒಟ್ಟು** | **10.40** |
| **II** | **ಲೆಕ್ಕಶೀರ್ಷಿಕೆ 2205–00–107–0–01 (ಯೋಜನೆ) 059–ಇತರೆ ಖರ್ಚು** | | | |
| | 1. ಬೆಂಗಳೂರಿನ ಸರ್ಕಾರಿ ವಸ್ತು ಸಂಗ್ರಹಾಲಯದ ಆವರಣದಲ್ಲಿ ಗ್ರಿಲ್ ಅಳವಡಿಸಿ ಬಾಬ್ತು (ವಾಸ್) | 0.42 | ಕಿತ್ತೂರು ವಸ್ತು ಸಂಗ್ರಹಾಲಯದ ಉದ್ಯಾನವನದ ನಿರ್ವಹಣೆಗೆ ಬೇಕಾಗುವ ಹೆಚ್ಚುವರಿ ಅನುದಾನ | 0.42 |
| | **ಒಟ್ಟು** | **0.42** | **ಒಟ್ಟು** | **0.42** |
| **III** | **ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) 059–ಇತರೆ ಖರ್ಚು** | | | |
| | 1. ಗಣಕೀಕರಣ ಹಾಗೂ ವೆಬ್‌ಸೈಟ್ ಕಾರ್ಯಕ್ರಮಗಳು | 1.40 | ಹೊಸ ಕಾಮಗಾರಿ:<br>ಕಳಲೆ ಲಕ್ಷ್ಮೀಕಾಂತ ಸ್ವಾಮಿ ದೇವಸ್ಥಾನದ ಸಂರಕ್ಷಣೆ | 4.15 |
| | 2. ಸಂರಕ್ಷಣಾ ಕಾಮಗಾರಿ:<br>ಅ) ಬಿನ್ನಮಂಗಳ ಮುಕ್ತಿನಾಥೇಶ್ವರ ದೇವಾಲಯ<br>ಆ) ಶಿವಮೊಗ್ಗ ಜಿಲ್ಲೆ, ಜಯನಗರ (ಸಾಲಗೇರಿ) ಶ್ರೀ ಈಶ್ವರ ದೇವಾಲಯ | <br>0.12<br><br>0.01 | | |

| | | | | |
|---|---|---|---|---|
| | ಇ) ಶ್ರೀರಂಗಪಟ್ಟಣದ ಐತಿಹಾಸಿಕ ಮದ್ದಿನ ಅರಮನೆ<br>ಈ) ಬಾಗಲಕೋಟೆ ತಾ: ಮಂಕಣಿ ಗ್ರಾಮದ ರಾಷ್ಟ್ರಕೂಟರ ಸ್ಮಾರಕಗಳ ಸಂರಕ್ಷಣೆ | 0.10<br><br>2.52 | | |
| | **ಒಟ್ಟು** | **4.15** | **ಒಟ್ಟು** | **4.15** |

ಈ ಆದೇಶವನ್ನು ಇಲಾಖೆಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 405

**ಪೆಮ್ಮಂಡ ಎಸ್. ರಾಣಿ**

ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಿ.ಎಸ್. ಗಂಗಾಧರರಾವ್, ಪಿ.ಎಸ್.ಐ., ವಾಡಿ ರೈಲ್ವೇ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರೈಲ್ವೇಸ್, ಬೆಂಗಳೂರು ಇವರ ಆದೇಶ ಸಂಖ್ಯೆ : ಪಿ.ಆರ್/44/2002-03, ದಿನಾಂಕ : 23-11-2002.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಐ.ಜಿ.ಪಿ. ರೈಲ್ವೇಸ್, ಬೆಂಗಳೂರು ಇವರ ಆದೇಶ ಸಂಖ್ಯೆ ಡಿ.ಇ/13/2002-03, ದಿನಾಂಕ : 4-6-2003.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 11-12-2002.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/155/2006-07, ದಿನಾಂಕ : 18-7-2007.

**ಪ್ರಸ್ತಾವನೆ:**

ಶ್ರೀ ಬಿ.ಎಸ್. ಗಂಗಾಧರರಾವ್, ಪಿ.ಎಸ್.ಐ., ವಾಡಿ ರೈಲ್ವೇ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ಶ್ರೀ ಬಿ.ಎಸ್. ಗಂಗಾಧರರಾವ್, ಪ್ರಭಾರ ಅ.ಉ.ನಿ. (ಹಾಲಿ ಅಮಾನತ್ತು) ಎಸ್.ಜಿ., ಡಿಪಿಓ, ರೈಲ್ವೇಸ್, ಬೆಂಗಳೂರು ರವರು ಈ ಹಿಂದೆ ಬೈಯಪ್ಪನಹಳ್ಳಿ ರೈಲ್ವೇ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ್ಗೆ ಠಾಣಾ ಮೊಕದ್ದಮೆ ಸಂಖ್ಯೆ: 14/2001 ಕಲಂ 279 ಭಾ.ದಂ.ಸಂ. ಮತ್ತು ಕಲಂ 134(ಬಿ) ಜೊತೆಗೂಡಿ 187 ಮೋಟಾರು ವಾಹನ ಕಾಯ್ದೆಯಲ್ಲಿನ ತನಿಖಾಧಿಕಾರಿಯಾಗಿ ಕೃತ್ಯ ನಡೆದ ಸ್ಥಳದಲ್ಲಿ ಅಮಾನತ್ತುಪಡಿಸಿಕೊಂಡ 364 ರ ಟ್ರ್ಯಾಕ್ಟರ್ ಟೇಲರ್ ಖಚಿತವಾದ ಮಾಲೀಕತ್ವ ಯಾರೆಂದು ಸರಿಯಾದ ವಿಳಾಸ ಹಾಗೂ ಸಾಕ್ಷ್ಯವನ್ನು ಪಡೆಯುವಲ್ಲಿ ವಿಫಲರಾಗಿದ್ದು, ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುವ ಆರೋಪ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರೈಲ್ವೇಸ್, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: 1) ರಲ್ಲಿ ಓದಲಾದ ದಿನಾಂಕ: 23-11-2002 ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಮುಂದಿನ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರೈಲ್ವೇಸ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: 2) ರಲ್ಲಿ ಓದಲಾದ ದಿ: 4-6-2003 ರ ಆದೇಶದಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿಯನ್ನು ಪುನರ್ ಪರಿಶೀಲಿಸಲು ಯಾವುದೇ ಹೊಸ ಅಂಶಗಳು ಕಂಡುಬರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ

ಪ್ರದರ್ಶಿಸಿರುವುದು ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒ.ಇ/252/ಪೊಸಿಅ/2007, ಬೆಂಗಳೂರು, ದಿ: 5ನೇ ಅಕ್ಟೋಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಬಿ.ಎಸ್.ಗಂಗಾಧರರಾವ್, ಪಿ.ಎಸ್.ಐ., ವಾಡಿ ರೈಲ್ವೇ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1834

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಆರ್ಥಿಕ ಸಚಿವಾಲಯ

**ವಿಷಯ:** ಪರಿಷ್ಕೃತ ವೇತನ ಮತ್ತು ನಿವೃತ್ತಿ ವೇತನದ ಬಾಕಿಯನ್ನು ಪಾವತಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 2007, ದಿನಾಂಕ 16–5–2007.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 16–5–2007ರ ಸರ್ಕಾರಿ ಆದೇಶದಲ್ಲಿ 2007ರ ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳನ್ವಯ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸಲಾಗಿದೆ. ಈ ಪರಿಷ್ಕೃತ ವೇತನ ಶ್ರೇಣಿಗಳನ್ನು 2005ರ ಜುಲೈ 1 ರಿಂದ ಜಾರಿಗೆ ಬರುವಂತೆ ಕಾಲ್ಪನಿಕವಾಗಿ ಜಾರಿಗೊಳಿಸಲಾಗಿದ್ದು, 1ನೇ ಏಪ್ರಿಲ್ 2006ರಿಂದ 31ನೇ ಮಾರ್ಚ್ 2007ರ ವರೆಗಿನ ಅವಧಿಯ ವೇತನ ಮತ್ತು ಭತ್ಯೆಗಳ ಹಾಗೂ ನಿವೃತ್ತಿ ವೇತನದ ಹೆಚ್ಚಳದ ಬಾಕಿ ಮೊತ್ತವನ್ನು 2008–09ನೇ ಆರ್ಥಿಕ ವರ್ಷದಲ್ಲಿ ಸಂದಾಯ ಮಾಡಲಾಗುವುದೆಂದು ಆದೇಶಿಸಲಾಗಿತ್ತು. ಸದರಿ ಬಾಕಿ ಪಾವತಿ ಕುರಿತು ಸೂಕ್ತ ಆದೇಶ ಹೊರಡಿಸುವ ಅವಶ್ಯಕತೆ ಇರುತ್ತದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 5 ಎಸ್‌ಆರ್‌ಪಿ 2008, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2008.**

2007ರ ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳನ್ವಯ ವೇತನ ನಿಗದಿಯಿಂದ 1ನೇ ಏಪ್ರಿಲ್ 2006ರಿಂದ 31ನೇ ಮಾರ್ಚ್ 2007ರ ವರೆಗಿನ ಅವಧಿಯಲ್ಲಿ ಹೆಚ್ಚಳವಾಗುವ ವೇತನ ಮತ್ತು ಭತ್ಯೆಗಳ ಬಾಕಿ ಮೊತ್ತವನ್ನು 2008–09ನೇ ಸಾಲಿನ ಆರ್ಥಿಕ ವರ್ಷದಲ್ಲಿ ಪಾವತಿಸಲು ಸರ್ಕಾರಿ ನೌಕರರ ವರ್ಗೀಕರಣವನ್ನು ಆಧರಿಸಿ ಈ ಕೆಳಕಂಡ ಅವಧಿಗೆ ಕ್ರಮಬದ್ಧಗೊಳಿಸಲು ಆದೇಶಿಸಿದೆ.

| ಕ್ರ. ಸಂ. | ಸರ್ಕಾರಿ ನೌಕರರ ವರ್ಗೀಕರಣ | 2007ರ ವೇತನ ಶ್ರೇಣಿ | ಪಾವತಿಸಲಾಗುವ ಅವಧಿ |
|---|---|---|---|
| 1 | "ಡಿ" ಗುಂಪು | 4800–7275 | 2008ರ ಮೇನಿಂದ 2008ರ ಜೂನ್‌ವರೆಗೆ |
| 2 | | 5200–8200 | |
| 3 | | 5500–9500 | |
| 4 | "ಸಿ" ಗುಂಪು | 5800–10500 | 2008ರ ಜುಲೈನಿಂದ 2008ರ ಸೆಪ್ಟೆಂಬರ್‌ವರೆಗೆ |
| 5 | | 6250–12000 | |
| 6 | | 6800–13000 | |
| 7 | | 7275–13350 | |
| 8 | | 8000–14800 | |
| 9 | | 8825–16000 | |
| 10 | | 9500–17250 | |
| 11 | | 10000–18150 | |
| 12 | "ಬಿ" ಗುಂಪು | 10800–20025 | 2008ರ ಅಕ್ಟೋಬರ್‌ನಿಂದ 2008ರ ಡಿಸೆಂಬರ್‌ವರೆಗೆ |
| 13 | | 11400–21600 | |
| 14 | | 12000–22650 | |
| 14(ಎ) | | 12650-23250 (sui-generis pay scale) | |
| 15 | | 13000–23850 | |

| | | | |
|---|---|---|---|
| 16 | "ಎ" ಗುಂಪು | 14050–25050 | 2009ರ ಜನವರಿಯಿಂದ 2009ರ ಫೆಬ್ರವರಿವರೆಗೆ |
| 17 | | 15200–25650 | |
| 18 | | 16400–26250 | |
| 19 | | 18150–26925 | |
| 20 | | 19050–27600 | |
| 21 | | 20025–28275 | |
| 22 | | 22125–30300 | |
| 23 | | 24450–31800 | |
| 24 | | 26250–36500 | |
| 25 | | 28275–39900 | |

ವೇತನ ಶ್ರೇಣಿಗಳ ಪರಿಷ್ಕರಣೆಯ ಕಾರಣದಿಂದ ದಿನಾಂಕ 1–4–2006ರಿಂದ 31–3–2007ರವರೆಗಿನ ಅವಧಿಗೆ ಆಗಿರುವ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಹೆಚ್ಚಳದ ಬಾಕಿ ಮೊತ್ತವನ್ನು 2008ರ ಮೇ ನಿಂದ 2008ರ ಜೂನ್‌ವರೆಗಿನ ಅವಧಿಯಲ್ಲಿ ಸಂದಾಯ ಮಾಡತಕ್ಕದ್ದು. ಹಾಗೂ ಮರಣ ಮತ್ತು ನಿವೃತ್ತಿ ಉಪದಾನದ (ಡಿಸಿಆರ್‌ಜಿ) ಬಾಕಿ ಮೊತ್ತವನ್ನು 2008ರ ಜುಲೈನಿಂದ 2008ರ ಸೆಪ್ಟೆಂಬರ್‌ವರೆಗಿನ ಅವಧಿಯಲ್ಲಿ ಸಂದಾಯ ಮಾಡತಕ್ಕದ್ದು.

ಈ ಆದೇಶವು 2007ರ ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳನ್ನು ವಿಸ್ತರಿಸಲಾಗಿರುವ ಅನುದಾನ ಪಡೆಯುವ ಶಿಕ್ಷಣ ಸಂಸ್ಥೆಗಳ ನೌಕರರಿಗೆ, ವಿಶ್ವವಿದ್ಯಾಲಯಗಳ ಬೋಧಕೇತರ ಸಿಬ್ಬಂದಿಗೆ ಹಾಗೂ ಸ್ಥಳೀಯ ಸಂಸ್ಥೆಗಳ (ಪಟ್ಟಣ ಪಂಚಾಯಿತಿ/ ಪಟ್ಟಣ ಪುರಸಭೆ/ ನಗರಸಭೆ/ ಮಹಾನಗರ ಪಾಲಿಕೆಗಳು) ನೌಕರರಿಗೂ ಅನ್ವಯಿಸತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.505

**ಸುಂದರ ರಾಜ ಗುಪ್ತ**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–2)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎನ್. ಬಸಪ್ಪ, ಎ.ಹೆಚ್.ಸಿ–9, ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಕೆ.ಜಿ.ಎಫ್. ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ಕೋಲಾರ ಇವರ ಆದೇಶ ಸಂಖ್ಯೆ: ಸಿಬ್ಬಂದಿ/1/ಶಿಕ್ಷೆ/8/2005, ದಿನಾಂಕ : 15–3–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/3/2005–06, ದಿ: 15–10–2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(3)/2005–06, ದಿನಾಂಕ : 8–6–2007.

**ಪ್ರಸ್ತಾವನೆ:**

ಶ್ರೀ ಎನ್. ಬಸಪ್ಪ, ಎ.ಹೆಚ್.ಸಿ–9, ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಕೆ.ಜಿ.ಎಫ್. ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ಶ್ರೀ ಎನ್. ಬಸಪ್ಪ, ಎ.ಹೆಚ್.ಸಿ.–9, ಎಪಿಸಿ. ಗಳಾದ 77 ಶ್ರೀನಿವಾಸ, 93 ಪರಮಶಿವಯ್ಯ, 101 ಎಂ. ಸುರೇಶ್, 145 ಕೆ.ಆರ್. ಅಣ್ಣಪ್ಪ, 174 ಎನ್.ವೆಂಕಟೇಶ್ ಮತ್ತು 196 ಟಿ. ಮಂಜುನಾಥ್ ಆದ ನೀವುಗಳು ಕೆ.ಜಿ.ಎಫ್.ನ ಜಿಲ್ಲಾ ಸಶಸ್ತ್ರ ಮೀಸಲು ಪಡೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 10–1–2005 ರಂದು 21–30 ಗಂಟೆಗೆ ದೂರವಾಣಿ ಮುಖಾಂತರ ಒಬ್ಬರು ನಿಯಂತ್ರಣಾ ಕೊಠಡಿಗೆ ದೂರವಾಣಿ ಮಾಡಿ ಕಾಕ್ಸ್‌ಟೌನ್ ಬ್ಲಾಕಿನಲ್ಲಿ ಕಿಡಿಗೇಡಿಗಳು ಮನೆ ಮತ್ತು ಆಸ್ತಿಪಾಸಿಗಳನ್ನು ಹೊಡೆದು ನಷ್ಟ ಮಾಡುತ್ತಿದ್ದಾರೆ ಎಂದು ತಿಳಿಸಿದ್ದು, ನಂತರ 23–00 ಗಂಟೆಯಲ್ಲಿ ಸಿಪಿಸಿ–74 ಮತ್ತು ಸಿಪಿಸಿ–51 ರವರು ವಾಕಿಟಾಕಿ ಮುಖಾಂತರ ತಮ್ಮನ್ನು 40–50 ಜನ ಅಟ್ಯಾಕ್ ಮಾಡಿದ್ದು, ಕೂಡಲೇ ಪೊಲೀಸರನ್ನು ಕಳುಹಿಸಿಕೊಡಲು ತಿಳಿಸಿದ್ದರ ಮೇರೆಗೆ ಡಿ.ಎ.ಆರ್. ಸಿಬ್ಬಂದಿಯವರನ್ನು ಕಳುಹಿಸಿಕೊಡಲು ರಾಬರ್ಟ್‌ಸನ್ ಪೇಟೆ ಪೊಲೀಸ್ ಠಾಣೆಯ ಆವರಣದಲ್ಲಿ ನೋಡಲಾಗಿ ಎ.ಹೆಚ್.ಸಿ.–21 ಶ್ರೀನಿವಾಸಯ್ಯ, ಒಬ್ಬರನ್ನು ಬಿಟ್ಟರೆ ನೀವುಗಳು ಗೈರುಹಾಜರಾಗಿದ್ದು,

ಗೈರುಹಾಜರಾಗಿರುವ ಬಗ್ಗೆ ಮಾಹಿತಿಯನ್ನು ಶ್ರೀ.ವಿ.ಶಂಕರಪ್ಪ, ಎ.ಎಸ್.ಐ. ರವರಿಗೆ ತಿಳಿಸಿದ್ದು, ಅವರು ಸಹ ಡಿ.ಎ.ಆರ್. ಸಿಬ್ಬಂದಿಯನ್ನು ಚೆಕ್ ಮಾಡಿರುತ್ತಾರೆ. ಶ್ರೀ ಅಬ್ದುಲ್ ಅಜೀಮ್, ಹೆಚ್.ಸಿ. (ನಿಸ್ತಂತು) ರವರು ತಮ್ಮ ವರದಿ ದಿನಾಂಕ: 10-1-2005 ರಲ್ಲಿ ತಿಳಿಸಿರುತ್ತಾರೆ.

ನೀವುಗಳು ಜವಾಬ್ದಾರಿಯುತ ಅಧಿಕಾರಿಗಳಾಗಿದ್ದು, ಕಂಟ್ರೋಲ್ ರೂಮಿನ ಕರ್ತವ್ಯಕ್ಕೆ ಗೈರುಹಾಜರಾಗಿ ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿಯನ್ನು ತೋರ್ಪಡಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಇವರು ಮೇಲೆ ಕ್ರಮ ಸಂಖ್ಯೆ: 1) ರಲ್ಲಿ ಓದಲಾದ ದಿನಾಂಕ: 15-3-2005ರ ಆದೇಶದಲ್ಲಿ ಅರ್ಜಿದಾರರಿಗೆ 100-00 ರೂ.ಗಳ ದಂಡವನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂಥಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 15-10-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ಅತಿ ಕನಿಷ್ಟ ಮಟ್ಟದ ಶಿಕ್ಷೆ 100-00 ರೂ.ಗಳ ದಂಡನೆಯನ್ನು ವಿಧಿಸಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒ.ಇ/268/ಪೊಸಿಅ/2007, ಬೆಂಗಳೂರು, ದಿ: 5ನೇ ಅಕ್ಟೋಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎನ್.ಬಸಪ್ಪ, ಎ.ಹೆಚ್.ಸಿ-9, ಜಿಲ್ಲಾ ಸಶಸ್ತ್ರ ಮೀಸಲು ಪಡೆ, ಕೆ.ಜಿ.ಎಫ್. ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1833

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಆರ್ಥಿಕ ಸಚಿವಾಲಯ

**ವಿಷಯ :** ವಿಶೇಷ ಭತ್ಯೆ ಮತ್ತು ಇತರ ಭತ್ಯೆಗಳನ್ನು ಕ್ರಮಬದ್ಧಗೊಳಿಸುವ ಕುರಿತ ಆದೇಶ.

**ಓದಲಾಗಿದೆ:** ಸರ್ಕಾರಿ ಅಧಿಸೂಚನೆ ಸಂ: ಆಇ 17 ಎಸ್‌ಆರ್‌ಪಿ 2007, ದಿನಾಂಕ 16-5-2007.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ 5ನೇ ವೇತನ ಆಯೋಗದ ಶಿಫಾರಸುಗಳ ಆಧಾರದ ಮೇಲೆ 2007ರ ಕರ್ನಾಟಕ ನಾಗರೀಕ ಸೇವೆಗಳು (ಪರಿಷ್ಕೃತ ವೇತನ) ನಿಯಮಗಳನ್ನು ಹೊರಡಿಸಲಾಗಿದೆ. 5ನೇ ರಾಜ್ಯ ವೇತನ ಆಯೋಗದ ಅಂತಿಮ ವರದಿಯ 2ನೇ ಸಂಪುಟದಲ್ಲಿ ಮಾಡಿರುವ ಶಿಫಾರಸುಗಳ ಮೇಲಿನ ಸರ್ಕಾರದ ತೀರ್ಮಾನವನ್ನು ಬಾಕಿ ಇರಿಸಿ ವಿವಿಧ ಭತ್ಯೆಗಳ ಪಾವತಿಯನ್ನು ಕ್ರಮಬದ್ಧಗೊಳಿಸುವುದು ಅಗತ್ಯವೆಂದು ಪರಿಗಣಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 40 ಎಸ್‌ಆರ್‌ಪಿ 2007 (ii) ಬೆಂಗಳೂರು, ದಿನಾಂಕ: 13ನೇ ಮಾರ್ಚ್ 2008.**

ಸರ್ಕಾರವು ವಿಶೇಷ ಭತ್ಯೆ, ವಾಹನ ಭತ್ಯೆ, ಯೋಜನಾ ಭತ್ಯೆ ಮತ್ತು ಆವೃತ್ತಿ (ನಾನ್ ಪ್ರಾಕ್ಟೀಸಿಂಗ್) ಭತ್ಯೆಗಳ ಪಾವತಿಯನ್ನು ದಿನಾಂಕ 1-4-2006ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಕ್ರಮಬದ್ಧಗೊಳಿಸಿ ಆದೇಶಿಸಲು ಹರ್ಷಿಸುತ್ತದೆ.

(ಅ) ಒಬ್ಬ ಸರ್ಕಾರಿ ನೌಕರನಿಗೆ ನಿಗದಿತ ಮೊತ್ತದಲ್ಲಿ ಮೇಲಿನ ಭತ್ಯೆಗಳನ್ನು ಮಂಜೂರು ಮಾಡಿದ್ದಲ್ಲಿ ಅದನ್ನು ಆತನು ಪ್ರಸಕ್ತ ದರದಲ್ಲಿ ಪಡೆದುಕೊಳ್ಳಲು ಅವಕಾಶ ನೀಡಬಹುದು;

(ಆ) ಒಬ್ಬ ಸರ್ಕಾರಿ ನೌಕರನಿಗೆ ಮೇಲಿನ ಭತ್ಯೆಗಳನ್ನು ಆತ ಪಡೆಯುತ್ತಿದ್ದ ವೇತನದ ಶೇಕಡಾವಾರು ಪ್ರಮಾಣದಲ್ಲಿ ಅಥವಾ ಆತನ ಹುದ್ದೆಯ ವೇತನ ಶ್ರೇಣಿಯ ಮಧ್ಯಮಾಂಕದ ಶೇಕಡಾ ಪ್ರಮಾಣದಲ್ಲಿ

ಮಂಜೂರು ಮಾಡಿದ್ದಲ್ಲಿ ಆತ ಪಡೆಯುತ್ತಿದ್ದ ದರದಲ್ಲಿ ಅಂದರೆ 2007ರ ಪರಿಷ್ಕೃತ ವೇತನ ಶ್ರೇಣಿಯನ್ನು ಜಾರಿಗೊಳಿಸದಿದ್ದ ಪಕ್ಷದಲ್ಲಿ ಯಾವ ದರದಲ್ಲಿ ಪಡೆಯಲಾಗುತ್ತಿತ್ತೋ ಆ ದರದಲ್ಲಿ ಪಡೆದುಕೊಳ್ಳಲು ಅವಕಾಶ ನೀಡಬಹುದು.

(ಇ) 2006ರ ಏಪ್ರಿಲ್ ಒಂದು ಅಥವಾ ಆನಂತರ ನೇಮಕಗೊಂಡ ಸರ್ಕಾರಿ ನೌಕರನು ಪ್ರಸಕ್ತ ಆದೇಶಗಳಿಗೆ ಅನುಗುಣವಾಗಿ ಮೇಲಿನ ಭತ್ಯೆಗಳಿಗೆ ಅರ್ಹನಾಗಿದ್ದಲ್ಲಿ ಆಯಾ ಪ್ರಕರಣಕ್ಕನುಗುಣವಾಗಿ ಮೇಲಿನ (ಅ) ಅಥವಾ (ಆ) ಗಳಂತೆ ಕ್ರಮಬದ್ಧಗೊಳಿಸತಕ್ಕದ್ದು.

2. ಈ ಭತ್ಯೆಗಳನ್ನು ಕ್ರಮಬದ್ಧಗೊಳಿಸುವಲ್ಲಿ ನಿಗದಿಪಡಿಸಿದ ಇತರ ಷರತ್ತುಗಳನ್ನು ಮುಂದುವರಿಸಿ ಅನ್ವಯಿಸತಕ್ಕದ್ದು.
3. ಈ ಆದೇಶಗಳು ಮುಂದಿನ ಆದೇಶಗಳವರೆಗೆ ಜಾರಿಯಲ್ಲಿರುತ್ತವೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುಂದರ ರಾಜ ಗುಪ್ತ**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು-2)

## FINANCE SECRETARIAT

**Sub :** Regulation of Special Allowance and other Allowances –orders regarding.

**Read :** Government Notification No. FD 17 SRP 2007, dated 16-5-2007.

**Preamble:**

Based on the recommendations of the Karnataka State 5th Pay Commission, the KCS (RP) Rules, 2007 have been issued. Pending decision of the Government on the recommendations made by the 5th State Pay Commission in its Final Report (II Volume), it is considered necessary to issue orders regulating payment of various allowances.

**Government Order No. FD 40 SRP 2007(II), Bangalore, Dated 13th March 2008**

Government are pleased to order that the payment of special allowance, conveyance allowance, project allowance and non-practicing allowance shall be regulated with effect from 1-4-2006 as follows:

(a) Where an allowance has been sanctioned to a Government servant, as a fixed amount, he may be allowed to draw it at the existing rate;

(b) Where an allowance has been sanctioned to a Government servant as a percentage of the pay drawn by him, or the mean of the scale of pay of the post held by him, he may be allowed to draw it at the rate at which he would have drawn it, but for the introduction of the Revised Scales of Pay, 2007;

(c) Where a Government servant is appointed on or after 1st April 2006 and is eligible for an allowance in accordance with the existing orders, the payment thereof shall be regulated as at (a) or (b) above, as the case may be.

The other conditions prescribed for regulating grant of these allowances shall continue to apply.

These orders will be in force until further orders.

By order and in the name of the President of India,

PR. 531

**SUNDARA RAJA GUPTHA**
Deputy Secretary to Government,
Finance Department. (Services-2)

**ವಿಷಯ :** ತುಟ್ಟಿಭತ್ಯೆಯ ದರಗಳ ಪರಿಷ್ಕರಣೆ.

**ಓದಲಾಗಿದೆ:**
1. ಸ.ಆ. ಸಂಖ್ಯೆ: ಎಫ್‌ಡಿ 17 ಎಸ್‌ಆರ್‌ಪಿ 2007, ದಿ: 16-5-2007.
2. ಸ.ಆ. ಸಂಖ್ಯೆ. ಎಫ್‌ಡಿ 19 ಎಸ್‌ಅರ್‌ಪಿ 2007, ದಿ: 16-5-2007.
3. ಸ.ಆ. ಸಂಖ್ಯೆ: ಎಫ್‌ಡಿ 21 ಎಸ್‌ಆರ್‌ಪಿ 2007, ದಿ: 28-5-2007.
4. ಸ.ಆ. ಸಂಖ್ಯೆ: ಎಫ್‌ಡಿ 42 ಎಸ್‌ಆರ್‌ಪಿ 2007, ದಿ: 27-9-2007.

**ಆದೇಶ ಸಂಖ್ಯೆ: ಎಫ್‌ಡಿ 3 ಎಸ್‌ಆರ್‌ಪಿ 2008, ಬೆಂಗಳೂರು, ದಿನಾಂಕ: 2ನೇ ಏಪ್ರಿಲ್ 2008.**

ಸರ್ಕಾರವು ದಿನಾಂಕ 1ನೇ ಜನವರಿ 2008ರಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಿ ನೌಕರರಿಗೆ 2007ರ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇ. 17.5 ರಿಂದ ಶೇ. 22.75ಕ್ಕೆ ಹೆಚ್ಚಿಸಿ ಮಂಜೂರು ಮಾಡಿದೆ.

2. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿಭತ್ಯೆಯನ್ನು ನಗದಾಗಿ ಮರು ಆದೇಶ ಹೊರಡಿಸುವವರೆಗೆ ಪಾವತಿ ಮಾಡಲಾಗುವುದು.

3. ಸರ್ಕಾರದ ಮತ್ತು ಜಿಲ್ಲಾ ಪಂಚಾಯತ್‌ಗಳ ಪೂರ್ಣಾವಧಿ ನೌಕರರಿಗೆ, ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ವರ್ಕ್‌ಚಾರ್ಜ್ ನೌಕರರಿಗೆ ಹಾಗೂ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ನೌಕರರುಗಳಿಗೆ ಈ ಆದೇಶ ಅನ್ವಯಿಸುತ್ತದೆ.

4. ಈ ಆದೇಶದ ಉದ್ದೇಶಗಳಿಗಾಗಿ ಮೂಲವೇತನ ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ 2007ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಪಡೆಯುವ ವೇತನ ಮತ್ತು ಅದರಲ್ಲಿ,

(ಅ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಸ್ಥಗಿತ ವೇತನ ಬಡ್ತಿಯನ್ನು ನೀಡಲಾಗಿದ್ದರೆ, ಆ ಸ್ಥಗಿತ ವೇತನ ಬಡ್ತಿ,

(ಆ) 2007ರ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳ 7ನೇ ನಿಯಮದ (3)ನೇ ಉಪನಿಯಮದ ಮೇರೆಗೆ ಅವನಿಗೆ ನೀಡಲಾದ ವೈಯಕ್ತಿಕ ವೇತನ ಯಾವುದಾದರೂ ಇದ್ದರೆ, ಆ ವೈಯಕ್ತಿಕ ವೇತನ ಸೇರುತ್ತವೆ.

5. ಮೂಲ ವೇತನಕ್ಕೆ ಮೇಲೆ ಸೂಚಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ದಗಳನ್ನು ಸೇರಿಸತಕ್ಕದ್ದಲ್ಲ.

6. ತುಟ್ಟಿಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

7. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2)

**Sub :** Dearness Allowance –Revision of rates.

**Read :** 1. G.O. No. FD 17 SRP 2007, dated: 16-5-2007.
2. G.O. No. FD 19 SRP 2007, dated: 16-5-2007.
3. G.O. No. FD 21 SRP 2007, dated: 28-5-2007.
4. G.O. No. FD 42 SRP 2007, dated: 27-9-2007.

**Order No. FD 3 SRP 2008, Bangalore, Dated 2nd April 2008**

Government are pleased to sanction increase in the rates of Dearness Allowance payable in the Revised pay scales 2007 from the existing 17.5% to 22.75% of the basic pay to the State Government employees with effect from 1st January 2008.

2. The increase in Dearness Allowance admissible under this order is payable in cash until further orders.

3. These orders will apply to the full time Government employees, employees of Zilla Panchayats, work charged employees on regular time scales of pay, full time employees of aided educational Institutions and Universities who are on regular time scales of pay.

4. For the purpose of this order, the term 'Basic Pay' means, pay drawn by a Government Employee in the scale of pay applicable to the post held by him and includes:

(a) Stagnation increment, if any, granted to him above the maximum of the scale of pay.

(b) Personal Pay, if any granted to him under sub-rule (3) of Rule 7 of the Karnataka Civil Services (Revised Pay) Rules, 2007.

5. Basic Pay shall not include any emoluments other than those specified above.

6. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

7. The Dearness Allowance will be shown as a distinct element of remuneration and will not be treated as pay for any purpose.

By order and in the name of the President of India,

PR. 542

**SUNDARA RAJA GUPTHA**

Deputy Secretary to Government,

Finance Department. (Services-2)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಶಶಿಕುಮಾರ್, ಸಿಪಿಸಿ–1866, ಅಶೋಕನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ಗುಲ್ಬರ್ಗಾ ಇವರ ಆದೇಶ ಸಂಖ್ಯೆ : ಪಿ.ಆರ್/307/2004, ದಿ: 4–3–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ : ಅಪೀಲು/34/ಈ.ವ/2005, ದಿ: 18–6–2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 20–4–2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/94/2006–07, ದಿನಾಂಕ : 19–6–2007.

**ಪ್ರಸ್ತಾವನೆ:**

ಶ್ರೀ ಶಶಿಕುಮಾರ್, ಸಿಪಿಸಿ–1866, ಅಶೋಕನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ದಿನಾಂಕ: 5/6–5–2004 ರಂದು ರಾತ್ರಿ ಗಸ್ತು ಕರ್ತವ್ಯದಲ್ಲಿ ಮಲಗಿಕೊಂಡು ದಿನಾಂಕ : 8–5–2004 ರಂದು ರಾತ್ರಿ ಮೇಲಧಿಕಾರಿಗಳ ಸಂಗಡ ಅಸಭ್ಯತನದಿಂದ ವರ್ತಿಸಿ, ಕಾರ್ಯವಿಮುಖತೆ ಹಾಗೂ ದುರ್ನಡತೆ ಪ್ರದರ್ಶಿಸಿದ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: 1) ರಲ್ಲಿ ಓದಲಾದ ದಿನಾಂಕ: 4–3–2005 ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂಥಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 18–6–2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ರಾತ್ರಿ ಗಸ್ತಿನ ವೇಳೆಯಲ್ಲಿ ಮಲಗಿಕೊಂಡು ಕರ್ತವ್ಯ ಲೋಪ ಮಾಡಿದ್ದಲ್ಲದೆ ಮೇಲಧಿಕಾರಿಗಳ ಜೊತೆ ಅಸಭ್ಯವಾಗಿ ವರ್ತಿಸಿರುವುದು ಸಾಭೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/255/ಪೊಸಿಅ/2007, ಬೆಂಗಳೂರು, ದಿ: 5ನೇ ಅಕ್ಟೋಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಶಿಕುಮಾರ್, ಸಿಪಿಸಿ–1866,

ಅಶೋಕನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1832

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಲಿಂಗಪ್ಪ, ಪಿ.ಎಸ್.ಐ.(ನಿ), ಶಿರಾ ನಗರ ಪೊಲೀಸ್ ಠಾಣೆ, ತುಮಕೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಕುರಿತು.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ತುಮಕೂರು ರವರ ಆದೇಶ ಸಂಖ್ಯೆ: ಪನ್ನಿ/431/2003, ದಿನಾಂಕ : 19–6–2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ರವರ ಆದೇಶ ಸಂಖ್ಯೆ : ಅಪೀಲು/19/2004–05, ದಿ: 23–11–2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 12–12–2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/41/2005, ದಿನಾಂಕ : 8–7–2005.
5) ಕಾರ್ಯದರ್ಶಿ, ಕೆ.ಪಿ.ಎಸ್.ಸಿ. ರವರ ಪತ್ರ ಸಂಖ್ಯೆ: ಪಿ.ಎಸ್.ಸಿ/ 210/ ಸಿ.ಎನ್.ಎಸ್/ 2006, ದಿ:4–9–2007.

**ಪ್ರಸ್ತಾವನೆ:**

ಶ್ರೀ ಲಿಂಗಪ್ಪ, ಪಿ.ಎಸ್.ಐ.(ನಿ), ಶಿರಾ ನಗರ ಪೊಲೀಸ್ ಠಾಣೆ, ತುಮಕೂರು ರವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ದಿನಾಂಕ: 12–12–2002 ರಂದು ರಾತ್ರಿ 9–00 ಗಂಟೆಯ ಸಮಯದಲ್ಲಿ ಎನ್.ಹೆಚ್.–4 ಮಾರನೇಗೆರೆ ಗೇಟ್ ಬಳಿ ಸಂಭವಿಸಿದ ಅಪಘಾತದ ಮೊ.ಸಂ: 94/2002, ಕಲಂ. 279–337, ಐಪಿಸಿ. ರೆ/ವಿ 134 (ಎ) (ಬಿ) ಐ.ಎಂ.ವಿ. ಆಕ್ಟ್ ರೀತಿ ಕೇಸು ದಾಖಲಿಸಿದ ನಂತರ ಗಾಯಾಳು ಮೃತಪಟ್ಟಿದ್ದು, ಮುಂದಿನ ತನಿಖೆಯನ್ನು ವಹಿಸಿಕೊಂಡು ಕೇಸಿನ ಆರೋಪಿ ಮತ್ತು ವಾಹನ ಪತ್ತೆ ಬಗ್ಗೆ ಯಾವುದೇ ಕ್ರಮ ಕೈಗೊಳ್ಳದೇ ಅಸಮರ್ಪಕ ತನಿಖೆ ನಡೆಸಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ದುರ್ನಡತೆ ತೋರಿರುವುದು.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಮೇಲೆ ಕ್ರಮ ಸಂಖ್ಯೆ: 1) ರಲ್ಲಿ ಓದಲಾದ ದಿನಾಂಕ: 19–6–2004 ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: 2) ರಲ್ಲಿ ಓದಲಾದ ದಿ: 23–11–2004 ರ ಆದೇಶದಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿ ಸಲ್ಲಿಸಿರುತ್ತಾರೆ. ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರಿಯ ದಂಡಾನುದೇಶವನ್ನು ಅನುಷ್ಠಾನಗೊಳಿಸಲು ಸಾಧ್ಯವಿರುವುದಿಲ್ಲ. ಶಿಸ್ತು ಪ್ರಾಧಿಕಾರಿ ಆದೇಶ ದಿನಾಂಕ: 19–6–2004 ಅರ್ಜಿದಾರರ ವಯೋನಿವೃತ್ತಿ ದಿನಾಂಕ : 31–5–2006 ಆಗಿರುತ್ತದೆ. ದಂಡನೆಯು ಮುಕ್ತಾಯವಾಗುವ ದಿನಾಂಕ: 18–6–2006 ಅಷ್ಟರಲ್ಲಿ ಅರ್ಜಿದಾರರು ನಿವೃತ್ತಿ ಹೊಂದಿರುತ್ತಾರೆ.

ಈ ಬಗ್ಗೆ ಪೊಲೀಸ್ ಅಧೀಕ್ಷಕರು, ತುಮಕೂರು ರವರು ತಮ್ಮ ಪತ್ರ ದಿ: 26–9–2006 ರಲ್ಲಿ ಅರ್ಜಿದಾರರು ದಂಡನಾ ಅವಧಿಯಲ್ಲೇ ನಿವೃತ್ತಿ ಹೊಂದಿರುವ ಕಾರಣ, ಅರ್ಜಿದಾರರಿಗೆ ವಿಧಿಸಲಾಗಿರುವ ಶಿಕ್ಷೆಯನ್ನು ಸರ್ಕಾರದ ಮಟ್ಟದಲ್ಲಿ ಮಾರ್ಪಡಿಸಿ ಶಿಕ್ಷಾ ಅವಧಿಯನ್ನು ಕಡಿಮೆ ಮಾಡಿ ಆದೇಶ ಹೊರಡಿಸಬಹುದೆಂದು ತಿಳಿಸಿರುತ್ತಾರೆ.

ಈ ಹಿನ್ನಲೆಯಲ್ಲಿ ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಪರಿಶೀಲಿಸಿ, ಇವರ ಸೇವಾ ಅವಧಿಯಲ್ಲಿನ ಸೇವೆಯನ್ನು ಪರಿಗಣಿಸಿ, ಇವರಿಗೆ ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡಾನುದೇಶವನ್ನು ರದ್ದುಪಡಿಸಿ, ಅರ್ಜಿದಾರರ ವಾರ್ಷಿಕ ವೇತನ ಬಡ್ತಿಗಳನ್ನು ಸಕ್ರಮಗೊಳಿಸಿ, ದೋಷಮುಕ್ತರನ್ನಾಗಿಸಲು ಸರ್ಕಾರವು ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಅದರಂತೆ ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 4–9–2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತಮ್ಮ ಸಹಮತಿ ನೀಡಲಾಗಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/85/ಪೊಸಿಅ/2005, ಬೆಂಗಳೂರು, ದಿ: 12ನೇ ಅಕ್ಟೋಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಲಿಂಗಪ್ಪ, ಪಿ.ಎಸ್.ಐ.(ನಿ), ಶಿರಾ ನಗರ ಪೊಲೀಸ್ ಠಾಣೆ, ತುಮಕೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1) ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ ಇವರ ವಾರ್ಷಿಕ ವೇತನ ಬಡ್ತಿಗಳನ್ನು ಸಕ್ರಮಗೊಳಿಸಿ ಬಿಡುಗಡೆಗೊಳಿಸಲು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ : ಪಿ.ಎಸ್.ಸಿ/210/ಸಿ.ಎನ್.ಎಸ್/2006, ದಿ: 4–9–07 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1906

**ಆರ್.ಎ.ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಅಮರಪ್ಪ, ಸಿಪಿಸಿ–71, ರಾಯಚೂರು ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ರಾಯಚೂರು ಇವರ ಆದೇಶ ಸಂಖ್ಯೆ ಸಿಬ್ಬಂದಿ/3/ಪಿ.ಆರ್/37/2006, ದಿನಾಂಕ: 19–4–2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ : ಅಪೀಲು/01/ಈ.ವ/2006, ದಿ: 17–10–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 30–5–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2) 25/2007–08, ದಿನಾಂಕ: 4–8–2007.

**ಪ್ರಸ್ತಾವನೆ:**

ಶ್ರೀ ಅಮರಪ್ಪ, ಸಿಪಿಸಿ–71, ರಾಯಚೂರು ಜಿಲ್ಲೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ಶ್ರೀ ಅಮರಪ್ಪ, ಸಿಪಿಸಿ–71, ರಾಯಚೂರು ಗ್ರಾಮೀಣ ಠಾಣೆ ಆದ ನೀವು ಗ್ರಾಮೀಣ ಠಾಣೆಯಲ್ಲಿ ಬರಹಗಾರರು ಅಂತ ಕರ್ತವ್ಯ ನಿರ್ವಹಿಸುತ್ತಿದ್ದು, ಮೇಲಧಿಕಾರಿಗಳಿಂದ ವಸೂಲಾದ ಜಾಬ್ ವೆರಿಫಿಕೇಷನ್ ವಿಚಾರಣಾ ವರದಿಯನ್ನು ನಿಗಧಿತ ಅವಧಿಯಲ್ಲಿ ವಿಚಾರಣೆ ಮಾಡಿ ವರದಿಯನ್ನು ಸೂಕ್ತ ಮಾರ್ಗವಾಗಿ ಕಳುಹಿಸಿಕೊಡುವುದು ನಿಮ್ಮ ಆದ್ಯ ಕರ್ತವ್ಯ. ಆದರೆ ನೀವು ನಿಮ್ಮ ಠಾಣೆಗೆ ವಸೂಲಾದ ಜಾಬ್ ವೆರಿಫಿಕೇಷನ್ ವಿಚಾರಣಾ ವರದಿಗಳನ್ನು ನಿಗಧಿತ ಅವಧಿಯಲ್ಲಿ ವಿಚಾರಣೆ ಮಾಡಿ ಕಳುಹಿಸಿಕೊಡುವಲ್ಲಿ ವಿಫಲರಾಗಿದ್ದರಿಂದ ನಿಮಗೆ ದಿನಾಂಕ: 13–2–2006 ರ ಸಾಯಂಕಾಲ 4–00 ಗಂಟೆಯೊಳಗಾಗಿ ಬಾಕಿ ಉಳಿದ 1. ಶ್ರೀ ಶಂಕರಪ್ಪ ತಂದೆ ಬಸಪ್ಪ, ಸಾ//ಚಿಕ್ಕಸೂಗೂರು 2. ಶ್ರೀ ಎಂ. ನರಸಪ್ಪ ತಂದೆ ದೇವಚಿದ್ರಪ್ಪ, ಸಾ// ಚಿಕ್ಕಸೂಗೂರು) ಎರಡು ಜಾಬ್ ವೆರಿಫಿಕೇಷನ್ ವಿಚಾರಣಾ ವರದಿಯನ್ನು ಖುದ್ದಾಗಿ ತಂದು ಮಾನ್ಯ ಜಿಲ್ಲಾ ಪೊಲೀಸ್ ಅಧಿಕಾರಿಗಳು, ರಾಯಚೂರು ರವರಿಗೆ ಭೇಟಿಯಾಗಲು ತಿಳಿಸಲಾಗಿತ್ತು. ಆದರೆ ನೀವು ಮೇಲ್ಕಂಡ ಬಾಕಿ ಇರುವ ವಿಚಾರಣಾ ವರದಿಯನ್ನು ತರದೇ ಹಾಗೂ ನಿಗಧಿತ ಸಮಯಕ್ಕೆ ಈ ಕಛೇರಿಯಲ್ಲಿ ಹಾಜರಾಗುವಲ್ಲಿ ವಿಫಲರಾಗಿ ಮೇಲಧಿಕಾರಿಗಳ ಆದೇಶವನ್ನು ಉಲ್ಲಂಘನೆ ಮಾಡಿ ಕರ್ತವ್ಯ ನಿರ್ಲಕ್ಷತನೆಯನ್ನು ಪ್ರದರ್ಶಿಸಿರುವಿರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರು ಮೇಲೆ ಕ್ರಮ ಸಂಖ್ಯೆ: 1) ರಲ್ಲಿ

ಓದಲಾದ ದಿನಾಂಕ: 19–4–2006 ರ ಆದೇಶದಲ್ಲಿ ಅರ್ಜಿದಾರರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ ಶಿಕ್ಷೆ ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂಥಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 17–10–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಮೇಲಧಿಕಾರಿಗಳು ಕೇಳಿರುವ ಮಾಹಿತಿಯನ್ನು ನೀಡದಿರುವುದು ದಾಖಲೆಗಳಿಂದ ಸಾಬೀತಾಗಿರುವುದರಿಂದ ಹಾಗೂ ಅರ್ಜಿಯನ್ನು ಪರಿಗಣಿಸಲು ಯಾವುದೇ ಅಂಶಗಳು ಕಂಡುಬರುತ್ತಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/272/ಪೊಸಿಅ/2007, ಬೆಂಗಳೂರು, ದಿ: ಅಕ್ಟೋಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅಮರಪ್ಪ, ಸಿಪಿಸಿ–71, ರಾಯಚೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1793

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಯು.ಎಸ್. ಶಿವಳ್ಳಿ, ಪಿ.ಐ., ಸಿ.ಓ.ಡಿ., ಬೆಂಗಳೂರು ಇವರು ಸಲ್ಲಿಸಿರುವ ಮೇಲ್ಮನವಿ ಕುರಿತು.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರ ಆದೇಶ ಸಂಖ್ಯೆ ಸಿಬ್ಬಂದಿ–3/ಸಿ.ಆರ್/58/2005, ದಿನಾಂಕ : 7–7–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ : ಅಪೀಲು/120/ಈ.ವ/2005, ದಿನಾಂಕ : 16–1–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 21–6–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿ/8/27/2006–07, ದಿನಾಂಕ : 13–9–2006.

**ಪ್ರಸ್ತಾವನೆ:**

ಶ್ರೀ ಯು.ಎಸ್. ಶಿವಳ್ಳಿ, ಪಿ.ಐ., ಸಿ.ಓ.ಡಿ., ಬೆಂಗಳೂರು ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಗಳು 1965 ರ ನಿಯಮ 7 ರಡಿಯಲ್ಲಿ ದೋಷಾರೋಪಣೆ ಪತ್ರ ಹೊರಡಿಸಿದೆ.

**ದೋಷಾರೋಪಣೆ:**

ಆ.ಪೋ.ಅ. ರವರೇ ನೀವು ಸಿಪಿಐ, ಲಿಂಗಸೂಗೂರು ಅಂತ ಕರ್ತವ್ಯ ನಿರ್ವಹಿಸುತ್ತಿದ್ದು, ನಿಮ್ಮ ವೃತ್ತ ಸರಹದ್ದಿಯಲ್ಲಿ ಮೋಟಾರು ವಾಹನ ಅಪಘಾತಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ನಿಮಗೆ ಜಿಲ್ಲಾ ಮಟ್ಟದ ಅಪರಾಧ ಸಭೆಯಲ್ಲಿ ಮತ್ತು ಉಪವಿಭಾಗದ ಅಪರಾಧ ಸಭೆಯಲ್ಲಿ ನಿಮಗೆ ಡ್ರೈವಿಂಗ್ ಲೈಸನ್ಸ್ ಇಲ್ಲದೇ ನಿರ್ಲಕ್ಷತೆಯಿಂದ ಮದ್ಯದ ಸೇವನೆಯ ಅಮಲಿನಲ್ಲಿ ಓಡಿಸುವ ವಾಹನ ಚಾಲಕರ ವಿರುದ್ಧ ಮತ್ತು ವಾಹನಗಳ ಮೇಲ್ಛಾವಣೆ ಮೇಲೆ ಫುಟ್‌ಬೋರ್ಡ್ ಮೇಲೆ ಬ್ಯಾನೆಟ್ ಮೇಲೆ ಪ್ರಯಾಣಿಕರನ್ನು ಸಾಗಿಸುವ ವಾಹನ ಚಾಲಕರ ವಿರುದ್ಧ ಮೋಟಾರು ವಾಹನ ಕಾಯ್ದೆ ಅಡಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರಕರಣಗಳನ್ನು ದಾಖಲಿಸಿಕೊಂಡು, ವಾಹನ ಅಪಘಾತಗಳನ್ನು ತಡೆಗಟ್ಟಲು ಮೇಲಧಿಕಾರಿಗಳು ನೀಡಿದ ಸಲಹೆ ಸೂಚನೆಗಳನ್ನು ನಿರ್ಲಕ್ಷಿಸಿ, ಬೇಜವಾಬ್ದಾರಿತನ ಪ್ರದರ್ಶಿಸಿ ಡಿಸೆಂಬರ್–04 ತಿಂಗಳಲ್ಲಿ ಕೇವಲ 8, ಜನವರಿ–05, ತಿಂಗಳಲ್ಲಿ–17 ಫೆಬ್ರವರಿ–05 ತಿಂಗಳಲ್ಲಿ ಕೇವಲ–1 ಪ್ರಕರಣಗಳನ್ನು ದಾಖಲಿಸಿಕೊಂಡು ಕರ್ತವ್ಯದಲ್ಲಿ ಬೇಜವಾಬ್ದಾರಿತನ, ಕರ್ತವ್ಯಲೋಪ ಎಸಗಿರುತ್ತಾರೆಂದು ಆರೋಪಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ. ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು ಇವರು ಮೇಲೆ ಕ್ರಮ ಸಂಖ್ಯೆ: 1) ರಲ್ಲಿ ಓದಲಾದ

ದಿ: 7–7–2005 ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮೂರು ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂಥಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರ.ಸ. (2)ರಲ್ಲಿ ಓದಲಾದ ದಿ: 16–1–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಮೇಲಧಿಕಾರಿಗಳ ಆದೇಶ ಪಾಲಿಸದೇ ಇರುವುದು ಮೇಲ್ನೋಟಕ್ಕೆ ಕಂಡುಬರುತ್ತಿದೆ. ಇಂತಹ ಸನ್ನಿವೇಶದಲ್ಲಿ ಶಿಸ್ತು ಪಾಲನಾ ಇಲಾಖೆಯಲ್ಲಿ ಸಣ್ಣ ಪ್ರಮಾಣದ ದಂಡನೆಯನ್ನು ವಿಧಿಸದಿದ್ದರೆ ಅವರನ್ನು ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/61/ಪೊಸಿಅ/2007, ಬೆಂಗಳೂರು, ದಿ: 16ನೇ ಅಕ್ಟೋಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಯು.ಎಸ್. ಶಿವಳ್ಳಿ, ಪಿ.ಐ., ಸಿ.ಓ.ಡಿ., ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1926

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಹೆಚ್.ವಿ. ಬಸವರಾಜು, ಪಿಸಿ–152, ಟೌನ್ ಪೊಲೀಸ್ ಠಾಣೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಕುರಿತು.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ಮಂಡ್ಯ ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಪಿ.ಆರ್–10/2005–06, ದಿನಾಂಕ: 27–7–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ದಕ್ಷಿಣ ವಲಯ, ಮೈಸೂರು ರವರ ಆದೇಶ ಸಂಖ್ಯೆ ಅಪೀಲು/38/2005–06, ದಿನಾಂಕ: 3–3–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 14–10–2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/63/2006–07, ದಿನಾಂಕ: 19–7–2006.
5) ಕಾರ್ಯದರ್ಶಿ, ಕೆ.ಪಿ.ಎಸ್.ಸಿ. ರವರ ಪತ್ರ ಸಂಖ್ಯೆ: ಪಿ.ಎಸ್.ಸಿ/190/ಸಿ.ಎನ್.ಎಸ್/2007, ದಿ: 27–7–2007.

**ಪ್ರಸ್ತಾವನೆ:**

ಶ್ರೀ ಹೆಚ್.ವಿ. ಬಸವರಾಜು, ಪಿಸಿ–152, ಟೌನ್ ಪೊಲೀಸ್ ಠಾಣೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ಶ್ರೀ ಹೆಚ್.ವಿ. ಬಸವರಾಜು, ಪಿಸಿ–152 ಆಗಿ ಕೆ.ಆರ್.ಪೇಟೆ ಟೌನ್, ಈ ಹಿಂದೆ ಶ್ರೀರಂಗಪಟ್ಟಣ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿನಾಂಕ: 5–3–2005 ರಂದು ಸಂಜೆ 6–00 ಗಂಟೆಯಲ್ಲಿ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಮಂಡ್ಯರವರು ಸಿಪಿಐ., ಶ್ರೀರಂಗಪಟ್ಟಣ ವೃತ್ತ ಕಛೇರಿಗೆ ಭೇಟಿ ಮಾಡಿ ಅಪರಾಧ ಅಂಕಿ ಅಂಶಗಳನ್ನು ಹಾಜರುಪಡಿಸಲು ಠಾಣಾ ಬರಹಗಾರರನ್ನು ಕೇಳಿದಾಗ ನೀವು ಠಾಣಾ ಬರಹಗಾರರು ಸಿಪಿಐ. ಅವರೊಂದಿಗೆ ಹೋಗಿರುತ್ತಾರೆಂದು ತಪ್ಪು ಮಾಹಿತಿ ನೀಡುವುದರ ಮೂಲಕ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಎಸಗಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಇವರು ಮೇಲೆ ಕ್ರಮ ಸಂಖ್ಯೆ: 1) ರಲ್ಲಿ

ಓದಲಾದ ದಿನಾಂಕ: 27–7–2005 ರ ಆದೇಶದಲ್ಲಿ ಅರ್ಜಿದಾರರು ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ: 8–3–2005 ರಿಂದ 22–5–2005 ರವರೆಗೆ ಅಮಾನತ್ತಿನ ಶಿಕ್ಷೆ ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ದಕ್ಷಿಣ ವಲಯ, ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂಥಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿ: 3–3–06ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಯಾವುದೇ ಅಪರಾಧ ಮೊಕದ್ದಮೆಯಲ್ಲಿ ಭಾಗಿಯಾಗಿರುವುದಿಲ್ಲ. ಅರ್ಜಿದಾರರು ಸಿಪಿಐ.ರವರ ಜೊತೆ ಜೀಪಿನಲ್ಲಿ ಬರಹಗಾರರು ಹೋದದ್ದು ನೋಡಿಯೇ, ತಿಳಿಸಿದ್ದರೂ, ಅದನ್ನು ಸುಳ್ಳು ಎಂದು ಪರಿಗಣಿಸಿ, ಶಿಕ್ಷೆ ವಿಧಿಸಿರುವುದು ಸಮಂಜಸವಾಗಿರುವುದಿಲ್ಲ. ಅರ್ಜಿದಾರರು ಯಾವುದೇ ಗುರುತರ ಆರೋಪ ಎಸಗಿರುವುದಿಲ್ಲವೆಂದು ಪರಿಗಣಿಸಿ, ಸರ್ಕಾರವು ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ, ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲಿನ ಅವಧಿ ಎಂದು ಪರಿಗಣಿಸಲು ಉದ್ದೇಶಿಸಿದೆ. ಈ ಸಂಬಂಧ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಆಯೋಗವು ದಿನಾಂಕ: 15–6–2007 ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/497/ಪೊಸಿಅ/2006, ಬೆಂಗಳೂರು, ದಿ: 27ನೇ ಆಗಸ್ಟ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಹೆಚ್.ವಿ.ಬಸವರಾಜು, ಪಿಸಿ–152, ಟೌನ್ ಪೊಲೀಸ್ ಠಾಣೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ, ಅಮಾನತ್ತಿನ ಅವಧಿಯನ್ನು ಕರ್ತವ್ಯದ ಮೇಲಿನ ಅವಧಿಯೆಂದು ಪರಿಗಣಿಸಲು ಆದೇಶಿಸಿದೆ.
2. ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿ.ಎಸ್.ಸಿ/ 190/ ಸಿ.ಎನ್.ಎಸ್/ 2006, ದಿನಾಂಕ: 15–6–2007 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1574

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎ.ಎಸ್. ಮಾದರ, ಮಾಜಿ ಪಿಸಿ–613, 2ನೇ ಪಡೆ, ಕೆ.ಎಸ್.ಆರ್.ಪಿ., ಬೆಳಗಾವಿ ಅವರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿ ಸಲ್ಲಿಸಿರುವ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 2ನೇ ಪಡೆ, ಕೆ.ಎಸ್.ಆರ್.ಪಿ. ಬೆಳಗಾವಿ.ಇವರ ಆದೇಶ ಸಂಖ್ಯೆ: ಸಿಬ್ಬಂದಿ.3/ಡಿಇ/293/2004–05, ದಿನಾಂಕ :25–10–2005
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ.ಪಿ.ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/47/2005–06 ದಿ: 17–03–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 25–01–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/93/2006–07, ದಿನಾಂಕ : 03–01–2007.

**ಪ್ರಸ್ತಾವನೆ:**

ಶ್ರೀ ಎ.ಎಸ್. ಮಾದರ, ಮಾಜಿ ಪಿಸಿ–613 2ನೇಪಡೆ, ಕೆ.ಎಸ್.ಆರ್.ಪಿ, ಬೆಳಗಾವಿ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ನೀವು ಮೊದಲನೆ ಹೆಂಡತಿಯಾದ ಶ್ರೀಮತಿ ಮಲ್ಲವ್ವ ಎಂಬುವವರೊಂದಿಗೆ ಸನ್ 1975 ರಲ್ಲಿ ಮದುವೆಯಾಗಿ ಸಂಸಾರ ನಡೆಯಿಸಿಕೊಂಡು ಒಂದು ಹೆಣ್ಣು ಮಗುವಿನ ತಂದೆ ಆಗಿದ್ದು, ನಂತರ ಸನ್ 1995 ರಲ್ಲಿ ಮೊದಲನೆಯ ಹೆಂಡತಿ ಜೀವಂತವಿರುವಾಗಲೇ ಶ್ರೀಮತಿ ನೀಲವ್ವ ಎಂಬುವವಳೊಂದಿಗೆ 2ನೇ ಮದುವೆ ಮಾಡಿಕೊಂಡು ಈ ಕುರಿತು ಸರ್ಕಾರದ ಅನುಮತಿ ಪಡೆಯದೇ ನಿಯಮ 28 ಕ.ನಾ.ಸೇ. (ವರ್ತನೆ) ನಿಯಮಾವಳಿ 1966 ನ್ನು ಉಲ್ಲಂಘನೆ ಮಾಡಿ ಕರ್ತವ್ಯದಲ್ಲಿ ಅತೀವ ದುರ್ನಡತೆ ಎಸಗಿರುವ ಆರೋಪ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 2ನೇ ಪಡೆ, ಕೆ.ಎಸ್.ಆರ್.ಪಿ., ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: 1) ರಲ್ಲಿ ಓದಲಾದ ದಿನಾಂಕ: 25-10-2005 ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಹಾಗೂ ಈ ಆದೇಶವು ಅವರಿಗೆ ಜಾರಿಯಾದ ದಿನಾಂಕದಿಂದಲೇ ಜಾರಿಗೆ ಬರುವಂತೆ ಶಿಕ್ಷೆ ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: 2) ರಲ್ಲಿ ಓದಲಾದ ದಿ: 17-3-2006 ರ ಆದೇಶದಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಈ ಎರಡು ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು 2ನೇ ಮದುವೆಯಾಗಿರುವುದು ಸಾಭೀತಾಗಿರುತ್ತದೆ. ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ/18/ಸೇಇವಿ/2001, ದಿನಾಂಕ: 14-9-2001ರ ಪ್ರಕಾರ 2ನೇ ಮದುವೆ ಮಾಡಿಕೊಂಡಲ್ಲಿ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿ ಮಾಡಬಹುದಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/184/ಪೊಸಿಅ/2007, ಬೆಂಗಳೂರು, ದಿ: 5ನೇ ಅಕ್ಟೋಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎ.ಎಸ್.ಮಾದರ, ಮಾಜಿ ಪಿಸಿ-613 2ನೇಪಡೆ, ಕೆ.ಎಸ್.ಆರ್.ಪಿ, ಬೆಳಗಾವಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1794

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿ. ವೆಂಕಟಸ್ವಾಮಿ, ಪಿಸಿ-506, ಈ-ಕಂಪನಿ, 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಪರಿಷ್ಕರಣಾ ಮೇಲ್ಮನವಿ ಕುರಿತು.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ-4/ಡಿಇ/70/97-98, ದಿನಾಂಕ : 26-9-2000.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಐ.ಜಿ.ಪಿ., ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ : 14/ಅಪೀಲು/2000-01, ದಿನಾಂಕ : 9-10-2001.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 20-10-2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/117/2006-07, ದಿನಾಂಕ : 9-5-2007.

**ಪ್ರಸ್ತಾವನೆ:**

ಶ್ರೀ ಸಿ. ವೆಂಕಟಸ್ವಾಮಿ, ಪಿಸಿ-506, ಈ-ಕಂಪನಿ, 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

1. ಪಿಸಿ–506, ಸಿ.ವೆಂಕಟಸ್ವಾಮಿ, ಈ–ದಳ, 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಆದ ನೀವು ದಿನಾಂಕ: 9–3–97 ರಂದು ಮುಳಬಾಗಿಲು ತಾಲ್ಲೂಕು, ಆವಣಿ ಗ್ರಾಮದ ರಾಮಲಿಂಗೇಶ್ವರಸ್ವಾಮಿ ದನಗಳ ಜಾತ್ರೆಯಲ್ಲಿ ಅಲ್ಲಿನ ಬಂದೋಬಸ್ತ್ ಕರ್ತವ್ಯ ನಿರತರಾಗಿದ್ದ ಶ್ರೀ.ಸಂಜೀವಪ್ಪ, ಪಿ.ಎಸ್.ಐ., ಕೋಲಾರ ಗ್ರಾಮಾಂತರ ಠಾಣೆ ಮತ್ತು ಶ್ರೀನಿವಾಸಮೂರ್ತಿ, ಪ್ರೊಬೇಷನರಿ ಪಿ.ಎಸ್.ಐ. ರವರುಗಳಿಗೆ ಅವಾಚ್ಯ ಶಬ್ಧಗಳಿಂದ ಬೈದು ಕೈಯಿಂದ ಹೊಡೆದು ಚಾಕುವಿನಿಂದ ತಿವಿಯಲು ಪ್ರಯತ್ನಿಸಿದ್ದು, ಈ ಸಂಬಂಧ ಮುಳಬಾಗಿಲು ಠಾಣೆ ಮೊಕದ್ದಮೆ ಸಂಖ್ಯೆ: 73/97 ಕಲಂ 332, ಕೆ.ವಿ. 34 ಐಪಿಸಿ. ಕೇಸ್‌ನಲ್ಲಿ ದಸ್ತಗಿರಿಯಾಗಿ ಅತೀವ ಅಶಿಸ್ತು ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುವಿರಿ.
2. ದಿನಾಂಕ: 3–10–1996 ರಂದು ನಿಮ್ಮನ್ನು ಸ್ಟ್ಯಾಂಡ್ ಬೈ ಕರ್ತವ್ಯಕ್ಕೆ ನೇಮಿಸಿದ್ದು, ಈ ಕರ್ತವ್ಯಕ್ಕೆ ತೆರಳದೇ ದಿನಾಂಕ: 16–10–1996 ರವರೆಗೆ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷತೆಯನ್ನು ತೋರಿ ಅತೀವ ದುರ್ನಡತೆಯನ್ನು ಪ್ರದರ್ಶಿಸಿರುವಿರಿ.
3. ನೀವು ದಿನಾಂಕ: 3–12–1996 ರಿಂದ 12–1–97, 10–2–97 ರಿಂದ 15–3–97 ಮತ್ತು 17–3–97 ರಿಂದ 11–5–97 ರವರೆಗೆ ಖಾಯಿಲೆ ವಿಶ್ರಾಂತಿಯಲ್ಲಿ ತೆರಳಿ ದಿನಾಂಕ: 12–5–1997 ರಿಂದ 15–6–97 ರವರೆಗೆ ರಜೆ ಮೀರಿ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರುಹಾಜರಾಗಿ ಈ ರೀತಿ ಆಗಿಂದಾಗ್ಗೆ ಅನಧೀಕೃತ ಗೈರುಹಾಜರಾಗುವ ಅಭ್ಯಾಸವನ್ನು ಬೆಳೆಸಿಕೊಂಡು ಅತೀವ ಕರ್ತವ್ಯ ಲೋಪವೆಸಗಿರುವುದು ನಿಮ್ಮ ಮೇಲಿನ ಆರೋಪಗಳಾಗಿರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, ಕೆ.ಎಸ್.ಆರ್.ಪಿ., 3ನೇ ಪಡೆ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: 1) ರಲ್ಲಿ ಓದಲಾದ ದಿನಾಂಕ 26–9–2000 ರ ಆದೇಶದಲ್ಲಿ ಅರ್ಜಿದಾರರನ್ನು ಸರ್ಕಾರಿ ಸೇವೆಯಿಂದ ತೆಗೆದು ಹಾಕಿದ ಶಿಕ್ಷೆ ವಿಧಿಸಿರುತ್ತಾರೆ. ಹಾಗೂ ಇವರ ಗೈರುಹಾಜರಿ ಅವಧಿಯನ್ನು ಸಂಬಳ ರಹಿತ ರಜೆಯೆಂದು ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂಥಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 9–10–2001 ರ ಆದೇಶದಲ್ಲಿ ಶ್ರೀ ವೆಂಕಟಸ್ವಾಮಿ, ಮಾಜಿ ಪಿಸಿ–506, 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರನ್ನು ಕಮಾಂಡೆಂಟ್, 3ನೇ ಪಡೆ ರವರು ಸೇವೆಯಿಂದ ವಜಾ ಮಾಡಲಾದ ಆದೇಶವನ್ನು ಮಾರ್ಪಡಿಸಿ ಇವರ 2 ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ ಮುಂದೂಡಲಾಗಿದೆ ಎಂದು, ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಹೊಸದಾಗಿ ಪಡೆಯುತ್ತಾರೆಂದು, ಗೈರು ಹಾಜರಿ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಲಾಗಿದೆ. ಸೇವೆಯಿಂದ ಹೊರಗುಳಿಸ ಅವಧಿಯನ್ನು (ಅಂದರೆ ಸೇವೆಯಿಂದ ವಜಾಗೊಂಡ ದಿನದಿಂದ ಮರಳಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವವರೆಗಿನ ಅವಧಿಯನ್ನು) ವೇತನ ರಹಿತ ರಜೆಯೆಂದು ಪರಿಗಣಿಸಿ ಆದೇಶ ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಬಗ್ಗೆ ಡಿ.ಜಿ. ಮತ್ತು ಐ.ಜಿ.ಪಿ.ರವರಿಂದ ಕ್ರಮ ಸಂಖ್ಯೆ (4) ರ ದಿನಾಂಕ: 9–5–2007 ರಲ್ಲಿ ಅಭಿಪ್ರಾಯ ಪಡೆಯಲಾಗಿದ್ದು, ಅದರಲ್ಲಿ ಪರಿಷ್ಕರಣಾ ಮೇಲ್ಮನವಿಯನ್ನು ತಿರಸ್ಕರಿಸಲು ಶಿಫಾರಸ್ಸು ಮಾಡಿರುತ್ತಾರೆ. ಅರ್ಜಿಯಲ್ಲಿನ ವಾದಾಂಶಗಳನ್ನೂ, ಇ. ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ ಅರ್ಜಿದಾರರು ಎಸಗಿರುವ ಆರೋಪಕ್ಕೆ ಶಿಸ್ತು ಪ್ರಾಧಿಕಾರ ಮೇಲ್ಮನವಿದಾರರಿಗೆ ನೀಡಿರುವ ಶಿಕ್ಷೆಯನ್ನು ತುಲನೆ ಮಾಡಿನೋಡಿದಾಗ ಸಮತೋಲನವಲ್ಲದ ಹೆಚ್ಚು ಶಿಕ್ಷೆಯಾಗಿರುವುದನ್ನು ಪರಿಶೀಲಿಸಿ ಸೇವೆಯಿಂದ ವಜಾಗೊಳಿಸಿದ ದಂಡನಾದೇಶವನ್ನು ಮಾರ್ಪಡಿಸಿ ಅರ್ಜಿದಾರರನ್ನು ಸೇವೆಗೆ ಪುನರ್ ಸ್ಥಾಪಿಸಿ ಅವರ 2 ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ ಮುಂದೂಡಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಅರ್ಜಿದಾರರು ಎಸಗಿರುವ ಕೃತ್ಯ ಗಂಭೀರ ಸ್ವರೂಪದಾಗಿದ್ದು, ಶಿಸ್ತು ಪ್ರಾಧಿಕಾರ ವಿಧಿಸಿದ ತೀವ್ರತರಹದ ದಂಡನಾದೇಶವನ್ನು ಮಾರ್ಪಡಿಸಿ ಮೇಲ್ಮನವಿ ಪ್ರಾಧಿಕಾರ ತೀವ್ರತರಹದ ದಂಡನೆಯನ್ನು ಕಡಿಮೆ ಮಾಡಿ ಆದೇಶ ಹೊರಡಿಸಿರುವುದರಿಂದ ಪರಿಷ್ಕರಣಾ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಯಾವುದೇ ಹೊಸ ಅಂಶಗಳು ಕಂಡುಬರುತ್ತಿಲ್ಲವಾದ್ದರಿಂದ ಪರಿಷ್ಕರಣಾ ಮೇಲ್ಮನವಿಯನ್ನು ತಿರಸ್ಕರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/166/ಪೊಸಿಅ/2007, ಬೆಂಗಳೂರು, ದಿ: 24ನೇ ಅಕ್ಟೋಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ. ವೆಂಕಟಸ್ವಾಮಿ, ಪಿಸಿ–506, ಈ–ಕಂಪನಿ, 3ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2005

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎನ್.ಆರ್. ಸಾರ್ವೇಕರ್, ಸಿಪಿಸಿ–587 ಮತ್ತು ಶ್ರೀ ಬಿ.ಪಿ. ನಾರಿ, ಸಿಪಿಸಿ–1874 ಇವರುಗಳ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಇವರ ಆದೇಶ ಸಂಖ್ಯೆ ಸಿಬ್ಬಂದಿ–2/ ಇ.ವಿ/03/2005, ದಿನಾಂಕ: 9–9–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/66/ಉ.ವ/2005, ದಿನಾಂಕ: 18–3–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 12–5–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)66/2006–07, ದಿನಾಂಕ : 27–7–2006.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿ.ಎಸ್.ಸಿ/100/ಸಿ.ಎನ್.ಎಸ್/07, ದಿನಾಂಕ: 4–9–2007.

**ಪ್ರಸ್ತಾವನೆ:**

ಶ್ರೀ ಎನ್.ಆರ್. ಸಾರ್ವೇಕರ್, ಸಿಪಿಸಿ–587 ಮತ್ತು ಶ್ರೀ.ಬಿ.ಪಿ.ನಾರಿ, ಸಿಪಿಸಿ–1874 ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಗಳು 1965 ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ಆ.ಮೋ.ಅ., ಸಿಪಿಸಿ–587, ಎನ್.ಆರ್. ಸಾರ್ವೇಕರ್ ಮತ್ತು ಸಿಪಿಸಿ–1874, ಬಿ.ಪಿ.ನಾರಿ ಇಬ್ಬರೂ ನೇಸರಗಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ನಿಮಗೆ ದಿ: 18–12–2004 ರಂದು ನೇಸರಗಿ ಠಾಣಾ ಹದ್ದಿಚುಲ್ಲಿ ಪೆಟ್ರೋಲ್ ಪಂಪ್ ಹತ್ತಿರ ನೇಸರಗಿ ವೃತ್ತದಲ್ಲಿ ರಾತ್ರಿ ಗಸ್ತು ಕರ್ತವ್ಯಕ್ಕೆ ನೇಮಿಸಿದ್ದು ಇತ್ತು. ಎ.ಎಸ್.ಪಿ. ಬೈಲಹೊಂಗಲ ರವರು ರಾತ್ರಿ ಗಸ್ತಿನ ಮೇಲ್ವಿಚಾರಣೆಯಲ್ಲಿದ್ದಾಗ ದಿನಾಂಕ: 19–12–2004 ರ ಬೆಳಗಿನ 4–15 ಗಂಟೆಗೆ ಹಾಗೂ 4–45 ಗಂಟೆಗೆ ನೇಸರಗಿ ಠಾಣೆಯ ಸರಹದ್ದಿನಲ್ಲಿರುವ ರಾತ್ರಿ ಗಸ್ತಿನ ಸಿಬ್ಬಂದಿಯನ್ನು ಪರಿಶೀಲನೆ ಮಾಡಿದ್ದು ಆ ವೇಳೆಯಲ್ಲಿ ನೇಸರಗಿ ಪೆಟ್ರೋಲ್ ಪಂಪ್ ಹತ್ತಿರ ನೇಸರಗಿ ವೃತ್ತದಲ್ಲಿ ರಾತ್ರಿ ಗಸ್ತಿನ ಕರ್ತವ್ಯದ ಮೇಲಿದ್ದ ಸಿಪಿಸಿ–587 ಎನ್.ಆರ್.ಸಾರ್ವೇಕರ ಮತ್ತು ಸಿಪಿಸಿ–187, ಬಿ.ಪಿ.ನಾರಿ ನೀವಿಬ್ಬರೂ ನಿಮ್ಮ ಕರ್ತವ್ಯಕ್ಕೆ ಗೈರುಹಾಜರಿ ಉಳಿದಿದ್ದು ನಿಮ್ಮ ಕರ್ತವ್ಯದಲ್ಲಿ ಘೋರ ನಿರ್ಲಕ್ಷತನ ಹಾಗೂ ನಿಷ್ಕಾಳಜಿತನವನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: 1) ರಲ್ಲಿ ಓದಲಾದ ದಿ: 9–9–2005ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ. ಸದರಿಯವರು ಹೊಸದಾಗಿ ವೇತನ ಬಡ್ತಿಯನ್ನು ಗಳಿಸುವುದು. ಸದರಿಯವರು ದಿನಾಂಕ: 19–12–200 ರಿಂದ 13–5–2005 ರವರೆಗೆ ಸೇವೆಯಿಂದ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತಿಗೆ ಸರಿ ಎಂದು ಪರಿಗಣಿಸುವುದು. ಈ ಅವಧಿಯಲ್ಲಿ ಸದರಿಯವರಿಗೆ ಹೆಚ್ಚಿಗೆ ವೇತನ ಸಂದಾಯವಾಗಿದ್ದಲ್ಲಿ ಅದನ್ನು ಅವರ ವೇತನದಿಂದ ಕಡಿತಗೊಳಿಸುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾವಿ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂಥಹ

ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರ.ಸ. (2)ರಲ್ಲಿ ಓದಲಾದ ದಿ: 18-3-2006 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಹಾಗೂ ಇಲಾಖಾ ವಿಚಾರಣಾ ದಾಖಲೆಯನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಸದರಿ ಅರ್ಜಿದಾರರು ಬೆಳಗಿನ ಜಾವ 4-15 ರಿಂದ 4-45 ಮಾತ್ರ ಅಂದರೆ 30 ನಿಮಿಷಗಳು ಮಾತ್ರ ಗೈರುಹಾಜರಾಗಿದ್ದಾರೆಂದು ವರದಿ ಮಾಡಿರುತ್ತಾರೆ. ಹಾಗೂ ಆರೋಪಿತ ಪೊಲೀಸ್ ಪೇದೆಗಳು ರಾತ್ರಿ ಪೂರ್ಣ ಕರ್ತವ್ಯಕ್ಕೆ ಗೈರುಹಾಜರಾಗದೇ ಬೆಳಗ್ಗೆ 4-15 ಗಂಟೆಯಿಂದ 4-45 ಗಂಟೆಯವರೆಗೆ ಮಾತ್ರ ಗೈರುಹಾಜರಾಗಿದ್ದು ದೃಢಪಟ್ಟಿದೆ. ಅವರಿಗೆ ತೀವ್ರ ಎಚ್ಚರಿಕೆ ನೀಡಬಹುದಾಗಿತ್ತು. ಇಂತಹ ಸಣ್ಣಪುಟ್ಟ ತಪ್ಪುಗಳಿಗೆ ಆರ್ಥಿಕ ನಷ್ಟ ಉಂಟುಮಾಡುವ ದಂಡನೆ ವಿಧಿಸಿದ್ದಲ್ಲಿ ಸಣ್ಣ ವೇತನದ ನೌಕರರ ಕೌಟುಂಬಿಕ ಆರ್ಥಿಕ ಸ್ಥಿತಿ ಡೋಲಾಯಮಾನವಾಗುವ ಹಾಗೂ ಸಂಕಷ್ಟಕ್ಕೆ ಬೀಳುವ ಸಂಭವವಿರುವುದರಿಂದ ಶಿಸ್ತು ಪ್ರಾಧಿಕಾರ ವಿಧಿಸಿರುವ ದಿನಾಂಕ: 9-9-2005 ತೀವ್ರತೆಯ ದಂಡನಾದೇಶವನ್ನು ರದ್ದುಪಡಿಸಿ ಇಬ್ಬರು ಪೇದೆಗಳಿಗೆ ತೀವ್ರತರ ಎಚ್ಚರಿಕೆ ನೀಡಿ ವೇತನವನ್ನು ಸಕ್ರಮಗೊಳಿಸಲು ಸರ್ಕಾರವು ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿ: 4-9-2007ರ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/147/ಪೊಸಿಅ/2007, ಬೆಂಗಳೂರು, ದಿ: 23ನೇ ಅಕ್ಟೋಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್.ಆರ್. ಸಾರ್ವೇಕರ್, ಸಿಪಿಸಿ-587 ಮತ್ತು ಶ್ರೀ ಬಿ.ಪಿ. ನಾರಿ, ಸಿಪಿಸಿ-1874 ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿಯನ್ನು ಪರಿಷ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ ಮುಂದೆ ಈ ರೀತಿ ಆಗದಂತೆ ತೀವ್ರ ಎಚ್ಚರಿಕೆ ನೀಡಿ ಆರೋಪ ಮುಕ್ತಗೊಳಿಸಿ ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಿ ಬಿಡುಗಡೆ ಮಾಡಲು ಆದೇಶಿಸಿದೆ.
2. ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿ.ಎಸ್.ಸಿ/100/ಸಿ.ಎನ್.ಎಸ್/07, ದಿನಾಂಕ: 4-9-2007 ರಲ್ಲಿ ನೀಡಿರುವ ಅಭಿಪ್ರಾಯದಂತೆ ಹೊರಡಿಸಿದೆ.

ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2009

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಸೈನಿಕ ಸನ್ಮಾನ ಗೌರವ ಧನ ಪರಿಯೋಜನೆ, 1969ಕ್ಕೆ ತಿದ್ದುಪಡಿ 1955-56ರಲ್ಲಿ ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ್ದವರಿಗೆ ರಾಜ್ಯ ಗೋವಾ ಗೌರವ ಧನ ನೀಡುವ ಯೋಜನೆಯ ಮಂಜೂರಾತಿ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 294 ಪಿಎಫ್ಎಸ್ 68, ದಿನಾಂಕ 21-2-1969.
2. ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 1347 ಪಿಎಫ್ಎಸ್ 87, ದಿನಾಂಕ 29-1-1991.
3. ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 1347 ಪಿಎಫ್ಎಸ್ 87, ದಿನಾಂಕ 12-8-1991.
4. ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 1347 ಪಿಎಫ್ಎಸ್ 87, ದಿನಾಂಕ 25-11-1991.
5. ಶ್ರೀ ಎನ್.ಕೆ. ಉಪಾಧ್ಯಾಯ ಇವರ ಪತ್ರ ದಿನಾಂಕ: 17-2-93 ಮತ್ತು ಶ್ರೀ ಜಿ.ಎಲ್. ರಾಮರೆಡ್ಡಿ, ಇವರ ಪತ್ರ ದಿನಾಂಕ 8-7-93.
6. ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 4264 ಪಿಪಿಜಿ 92 ದಿನಾಂಕ 5-4-1993.
7. ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 4264 ಪಿಪಿಜಿ 92 ದಿನಾಂಕ 2-4-1994.
8. ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 4264 ಪಿಪಿಜಿ 92 ದಿನಾಂಕ 19-4-1995.
9. ರಿಟ್ ಅರ್ಜಿ ಸಂಖ್ಯೆ: 15125-223/94ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ದಿ: 13-7-94ರಲ್ಲಿ ನೀಡಿರುವ ಆದೇಶ.

10. ರಿಟ್ ಅಪೀಲು ಸಂಖ್ಯೆ: 52–179, 2879–966, 3367–97, 3286–301/1995ರಲ್ಲಿ ಕರ್ನಾಟಕ ಉಚ್ಛ ನ್ಯಾಯಾಲಯವು ದಿನಾಂಕ 15–1–97ರಂದು ನೀಡಿರುವ ಆದೇಶ.
11. ರಿಟ್ ಅರ್ಜಿ ಸಂಖ್ಯೆ: 32264–69/1995, 40783/1995, 226–68/96ರಲ್ಲಿ ಕರ್ನಾಟಕ ಉಚ್ಛ ನ್ಯಾಯಾಲಯವು ದಿನಾಂಕ 3–3–97ರಂದು ನೀಡಿರುವ ಆದೇಶ.
12. ರಿಟ್ ಅಪೀಲು ಸಂಖ್ಯೆ: 2091–92/1997ರಲ್ಲಿ ಕರ್ನಾಟಕ ಉಚ್ಛ ನ್ಯಾಯಾಲಯದ ದಿನಾಂಕ 19–6–1998ರ ಆದೇಶ.
13. ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 9 ಪಿಪಿಜಿ 97 ದಿನಾಂಕ 29–11–1997.
14. ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 9 ಪಿಪಿಜಿ 97 ದಿನಾಂಕ 31–3–2000.
15. ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 1 ಪಿಪಿಜಿ 2001 ದಿನಾಂಕ 3–3–2001.
16. ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 17 ಪಿಪಿಜಿ 2001 ದಿನಾಂಕ 24–12–2002.
17. ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 119 ಪಿಪಿಜಿ 2001 ದಿನಾಂಕ 19–11–2003.
18. ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 119 ಪಿಪಿಜಿ 2001 ದಿನಾಂಕ 7–2–2005.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ, ದಿನಾಂಕ 21–2–1969ರ ಸರ್ಕಾರದ ಆದೇಶದಲ್ಲಿ, ಕರ್ನಾಟಕ ರಾಜ್ಯ ಸ್ವಾತಂತ್ರ್ಯ ಸೈನಿಕ ಸನ್ಮಾನ ಗೌರವ ಧನ ಪರಿಯೋಜನೆ, 1969ನ್ನು ಜಾರಿಗೆ ತರಲಾಯಿತು. ಸದರಿ ಯೋಜನೆಗೆ ಕಾಲಕಾಲಕ್ಕೆ ತಿದ್ದುಪಡಿ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾದ, ದಿನಾಂಕ 29–1–1991ರ ಸರ್ಕಾರದ ಆದೇಶದಲ್ಲಿ, ದಿನಾಂಕ 21–2–1969ರ ಸರ್ಕಾರದ ಆದೇಶದಲ್ಲಿ ಜಾರಿಗೆ ತಂದ ಕರ್ನಾಟಕ ರಾಜ್ಯ ಸೈನಿಕ ಸನ್ಮಾನ ಗೌರವ ಧನ ಪರಿಯೋಜನೆ, 1969ಕ್ಕೆ ತಿದ್ದುಪಡಿ ಮಾಡಿ, 1955–56ರ ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ್ದವರಿಗೆ ಗೌರವ ಧನ ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿತ್ತು. ಮತ್ತು ಸದರಿ ಯೋಜನೆಯನ್ನು ದಿನಾಂಕ 1–1–1991ರಿಂದಲೇ ಜಾರಿಗೊಳಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ, ದಿನಾಂಕ 12–8–1991ರ ಸರ್ಕಾರದ ಆದೇಶದಲ್ಲಿ, ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿರುವ ಬಗ್ಗೆ ದಾಖಲೆಗಳನ್ನು ಪಡೆಯುವುದು ಕಷ್ಟ ಸಾಧ್ಯವಾದುದನ್ನು ಗಮನಿಸಿ, ಶ್ರೀ ಜಿ.ಎಲ್. ರಾಮರೆಡ್ಡಿಯವರನ್ನು ತಂಡದ ನಾಯಕರನ್ನಾಗಿ ನೇಮಿಸಿ, ಅವರಿಗೆ 1955–56ರ ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ್ದವರನ್ನು ಗುರುತಿಸಿ, ಗೋವಾ ಸತ್ಯಾಗ್ರಹಿಗಳಿಗೆ ಗುರುತಿನ ಪ್ರಮಾಣ ಪತ್ರ ನೀಡಲು ಸೂಚಿಸಲಾಯಿತು.

ಮೇಲೆ (4)ರಲ್ಲಿ ಓದಲಾದ, ದಿನಾಂಕ 25–11–1991ರ ಸರ್ಕಾರದ ಆದೇಶದಲ್ಲಿ, ಗೋವಾ ವಿಮೋಚನಾ ಚಳುವಳಿಗಾರರಿಗೆ ಗೌರವ ಧನ ಮಂಜೂರು ಮಾಡುವ ಬಗ್ಗೆ ಸರ್ಕಾರಕ್ಕೆ ಸಲಹೆ ನೀಡಲು ಶ್ರೀ ವಿ.ಆರ್. ನಾಯ್ಡು ಅಧ್ಯಕ್ಷತೆಯಲ್ಲಿ 13 ಸದಸ್ಯರನ್ನೊಳಗೊಂಡ ಸಲಹಾ ಸಮಿತಿಯನ್ನು ರಚಿಸಲಾಗಿತ್ತು.

ಶ್ರೀ ಜಿ.ಎಲ್. ರಾಮರೆಡ್ಡಿರವರು ನೀಡಿದ್ದ ಪ್ರಮಾಣ ಪತ್ರಗಳ ಆಧಾರದ ಮೇರೆಗೆ ಹಾಗೂ ಶ್ರೀ ವಿ.ಆರ್. ನಾಯ್ಡು ಸಮಿತಿಯ ಶಿಫಾರಸ್ಸಿನ ಮೇರೆಗೆ ದಿನಾಂಕ 1–1–1991ರಿಂದ ದಿನಾಂಕ 5–4–1993ರ ಅವಧಿಯಲ್ಲಿ ಒಟ್ಟು 2,225 ಗೋವಾ ವಿಮೋಚನಾ ಚಳುವಳಿಗಾರರಿಗೆ ಸ್ವಾತಂತ್ರ್ಯ ಯೋಧರ ರಾಜ್ಯ ಗೋವಾ ಗೌರವ ಧನ ಮಂಜೂರು ಮಾಡಲಾಗಿತ್ತು.

ಮೇಲೆ (5) ರಲ್ಲಿ ಓದಲಾದ ದಿನಾಂಕ 17–2–1993ರ ಹಾಗೂ ದಿನಾಂಕ 8–7–1993ರ ಶ್ರೀ ಎನ್.ಕೆ. ಉಪಾಧ್ಯಾಯ ಮತ್ತು ಶ್ರೀ ಜಿ.ಎಲ್. ರಾಮರೆಡ್ಡಿರವರ ಪತ್ರಗಳಲ್ಲಿ ರಾಜ್ಯ ಗೋವಾ ಗೌರವ ಧನ ಮಂಜೂರು ಮಾಡಿರುವ ಹಲವಾರು ಪ್ರಕರಣಗಳಲ್ಲಿ ಶ್ರೀ ಜಿ.ಎಲ್. ರಾಮರೆಡ್ಡಿರವರ ಸಹಿಯನ್ನು ಫೋರ್ಜರಿ ಮಾಡಲಾಗಿದೆ ಹಾಗೂ ಗೌರವ ಧನ ಮಂಜೂರು ಮಾಡುವಲ್ಲಿ ಭ್ರಷ್ಟಾಚಾರ ನಡೆದಿದೆಯೆಂದು ಆಪಾದಿಸಿದ್ದರು.

ಮೇಲೆ (6)ರಲ್ಲಿ ಓದಲಾದ ದಿನಾಂಕ 5–4–1993ರ ಸರ್ಕಾರದ ಆದೇಶದಲ್ಲಿ, ರಾಜ್ಯ ಗೋವಾ ಗೌರವ ಧನ ಯೋಜನೆಯು ಸಮರ್ಪಕವಾಗಿ ಕೆಲಸ ಮಾಡದ ಕಾರಣ, ಸರ್ಕಾರವು ಈ ಯೋಜನೆಯನ್ನು ಸಮಗ್ರವಾಗಿ ಪುನರಾವಲೋಕಿಸಿ, ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ್ದ ಚಳುವಳಿಗಾರರಿಗೆ ರಾಜ್ಯ ಗೋವಾ ಗೌರವ ಧನ ಮಂಜೂರು ಮಾಡುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸ್ಥಗಿತಗೊಳಿಸಲಾಯಿತು.

ಮೇಲೆ (7)ರಲ್ಲಿ ಓದಲಾದ, ದಿನಾಂಕ 2–4–1994ರ ಸರ್ಕಾರದ ಆದೇಶದಲ್ಲಿ, ಶ್ರೀ ಜಿ.ಎಲ್. ರಾಮರೆಡ್ಡಿರವರು ನೀಡಿದ್ದ ಪ್ರಮಾಣ ಪತ್ರಗಳ ಆಧಾರದ ಮೇಲೆ ಮಂಜೂರಾಗಿದ್ದ ಪ್ರಕರಣಗಳ ಪೈಕಿ 1946 ಗೋವಾ ವಿಮೋಚನಾ ಚಳುವಳಿಗಾರರಿಗೆ ಮಂಜೂರಾಗಿದ್ದ ರಾಜ್ಯ ಗೋವಾ ಗೌರವ ಧನವನ್ನು ರದ್ದುಗೊಳಿಸಲಾಯಿತು.

ಮೇಲೆ (8)ರಲ್ಲಿ ಓದಲಾದ ದಿನಾಂಕ 19–4–1995ರ ಸರ್ಕಾರದ ಆದೇಶದಲ್ಲಿ, ದಿನಾಂಕ 29–1–1991ರ ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 1347 ಪಿಎಫ್ಎಸ್ 87ರಲ್ಲಿ ಕರ್ನಾಟಕ ರಾಜ್ಯ ಸೈನಿಕ ಸನ್ಮಾನ ಗೌರವ ಧನ ಪರಿಯೋಜನೆ, 1969ಕ್ಕೆ ಮಾಡಿದ್ದ ತಿದ್ದುಪಡಿಯನ್ನು ದಿನಾಂಕ 19–4–1995ರಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳಲಾಯಿತು.

ಆದಕಾರಣ, ದಿನಾಂಕ 19–4–1995ರಿಂದ ಗೋವಾ ವಿಮೋಚನಾ ಚಳುವಳಿಗಾರರಿಗೆ ರಾಜ್ಯ ಗೋವಾ ಗೌರವ ಧನ ನೀಡುವ ಯೋಜನೆಯು ಅಸ್ತಿತ್ವದಲ್ಲಿರುವುದಿಲ್ಲ.

ಮೇಲೆ (9)ರಲ್ಲಿ ಓದಲಾದ ದಿನಾಂಕ 13–7–1994ರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು, ಸರ್ಕಾರದ ಆದೇಶದ ಸಂಖ್ಯೆ: ಡಿಪಿಎಆರ್ 4264 ಪಿಪಿಜಿ 92 ದಿನಾಂಕ 2–4–1994ನ್ನು ರದ್ದುಗೊಳಿಸಿ, ಅರ್ಜಿದಾರರಿಗೆ ನೋಟೀಸು ನೀಡಿ, ಅವರ ಅಹವಾಲುಗಳನ್ನು ಕೇಳಿ, ಪ್ರಕರಣಗಳನ್ನು ಪುನರ್ ಪರಿಗಣಿಸಬೇಕೆಂದು ಆದೇಶಿಸಿತ್ತು.

ಮೇಲೆ (10)ರಲ್ಲಿ ಓದಲಾದ ದಿನಾಂಕ 15–1–1997ರ ತನ್ನ ಆದೇಶದಲ್ಲಿ, ಕರ್ನಾಟಕ ಉಚ್ಚ ನ್ಯಾಯಾಲಯವು ಏಕ ಸದಸ್ಯ ಪೀಠದ ದಿನಾಂಕ 13–7–1994ರ ಸರ್ಕಾರದ ಆದೇಶವನ್ನು ಎತ್ತಿ ಹಿಡಿದು, ರಾಜ್ಯ ಗೋವಾ ಗೌರವ ಧನ ಯೋಜನೆಯನ್ನು ರಾಜ್ಯ ಸರ್ಕಾರವು ಹಿಂತೆಗೆದುಕೊಂಡಿರುವ ದಿನಾಂಕದವರೆಗೆ ಅರ್ಜಿದಾರರನ್ನು ಸೌಲಭ್ಯ ವಂಚಿತರನ್ನಾಗಿ ಮಾಡುವುದು ಸಾಧುವಲ್ಲ ಹಾಗೂ ಅರ್ಜಿದಾರರಿಗೆ ಯೋಜನೆ ಜಾರಿಯಲ್ಲಿ ನೀಡಿದ್ದ ದಿನಾಂಕದವರೆಗೆ ಗೋವಾ ಗೌರವ ಧನವನ್ನು ಮಂಜೂರು ಮಾಡಲು ಪರಿಗಣಿಸಬೇಕೆಂದು ಆದೇಶಿಸಿತ್ತು.

ಮೇಲೆ (11)ರಲ್ಲಿ ಓದಲಾದ ದಿನಾಂಕ 3–3–1997ರ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಲ್ಲಿ, ಸರ್ಕಾರವು ರಾಜ್ಯ ಗೋವಾ ಗೌರವ ಧನ ಯೋಜನೆಯನ್ನು ಹಿಂತೆಗೆದುಕೊಂಡಿರುವುದನ್ನು ಎತ್ತಿ ಹಿಡಿಯಲಾಗಿದೆ.

ಮೇಲೆ (12)ರಲ್ಲಿ ಓದಲಾದ ದಿನಾಂಕ 19–6–1998ರ ಕರ್ನಾಟಕ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠದ ಆದೇಶದಲ್ಲಿ ರಿಟ್ ಅಪೀಲನ್ನು ವಜಾ ಮಾಡಲಾಗಿದೆ ಮತ್ತು ಸರ್ಕಾರವು ರಾಜ್ಯ ಗೋವಾ ಗೌರವ ಧನ ಯೋಜನೆಯನ್ನು ಹಿಂತೆಗೆದುಕೊಂಡಿರುವುದನ್ನು ಎತ್ತಿ ಹಿಡಿಯಲಾಗಿದೆ.

ಮೇಲೆ (13) ರಿಂದ (18)ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ, ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶವನ್ನು ಪಾಲಿಸುವ ದೃಷ್ಟಿಯಿಂದ ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿರುವ ಬಗ್ಗೆ ಯಾವುದೇ ಅಧಿಕೃತ ದಾಖಲೆಗಳು ಲಭ್ಯವಿಲ್ಲದ ಕಾರಣ, ಶ್ರೀ ಜಿ.ಎಲ್. ರಾಮರೆಡ್ಡಿರವರು ಪರಿಶೀಲಿಸಿ ನೀಡಿದ್ದ ಪ್ರಮಾಣ ಪತ್ರಗಳ ಆಧಾರದ ಮೇರೆಗೆ ಒಟ್ಟು 1,312 ಗೋವಾ ವಿಮೋಚನಾ ಚಳುವಳಿಗಾರರಿಗೆ ರಾಜ್ಯ ಗೋವಾ ಗೌರವ ಧನ ಬಾಕಿ ಹಣವನ್ನು ದಿನಾಂಕ 19–4–1995ರವರೆಗೆ ಮಂಜೂರು ಮಾಡಲಾಗಿದೆ.

2007–08ನೇ ಸಾಲಿನ ಆಯವ್ಯಯದಲ್ಲಿ ಸರ್ಕಾರವು ಗೋವಾ ವಿಮೋಚನಾ ಚಳುವಳಿಗಾರರಿಗೆ ಮಾಸಿಕ 2,000/– ರೂ.ಗಳ ಗೌರವ ಧನ ನೀಡಲು ಘೋಷಿಸಿರುವುದರಿಂದ ಹಾಗೂ ಗೋವಾ ವಿಮೋಚನಾ ಚಳುವಳಿಗಾರರ ಸಂಘ ಸಂಸ್ಥೆಗಳಿಂದ ಗೋವಾ ವಿಮೋಚನಾ ಚಳುವಳಿಗಾರರಿಗೆ ರಾಜ್ಯ ಗೋವಾ ಗೌರವ ಧನವನ್ನು ಮಂಜೂರು ಮಾಡುವಂತೆ ಹಲವಾರು ಮನವಿಗಳು ಬಂದಿರುವುದನ್ನು ಸರ್ಕಾರವು ಪರಿಶೀಲಿಸಿ, ರಾಜ್ಯ ಗೋವಾ ಗೌರವ ಧನ ಯೋಜನೆಯನ್ನು ಪ್ರಾರಂಭಿಸಲು ಸರ್ಕಾರವು ತೀರ್ಮಾನಿಸಿರುವ ಕಾರಣ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಪಿಪಿಜಿ 2007 ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಕರ್ನಾಟಕ ರಾಜ್ಯ ಸೈನಿಕ ಸನ್ಮಾನ ಗೌರವ ಧನ ಪರಿಯೋಜನೆ, 1969ಕ್ಕೆ (ಕಾಲಕಾಲಕ್ಕೆ ಮಾಡಿದ ತಿದ್ದುಪಡಿ) ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ:

> "1955–56ರ ಗೋವಾ ಚಳುವಳಿಯಲ್ಲಿ ಭಾಗವಹಿಸಿದ್ದವರಿಗೆ ಮಾತ್ರ ರಾಜ್ಯ ಗೋವಾ ಗೌರವ ಧನ ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ ಮತ್ತು ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೊಳಿಸಲಾಗಿದೆ".

ಗೋವಾ ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ್ದ ಚಳುವಳಿಗಾರರಿಗೆ ಮಾಹೆಯಾನ 2,000/– ರೂ.ಗಳ (ಎರಡು ಸಾವಿರ ರೂಪಾಯಿಗಳು ಮಾತ್ರ) ರಾಜ್ಯ ಗೋವಾ ಗೌರವ ಧನವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಮಂಜೂರು ಮಾಡಲಾಗಿದೆ.

ಗೋವಾ ವಿಮೋಚನಾ ಚಳುವಳಿಗಾರರಿಗೆ ರಾಜ್ಯ ಗೋವಾ ಗೌರವ ಧನ ಮಂಜೂರಾತಿಗೆ ಸಂಬಂಧಿಸಿದಂತೆ ಮಾರ್ಗಸೂಚಿಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಈ ಪ್ರಸ್ತಾವನೆಗೆ ಸಂಬಂಧಿಸಿದ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "2235–60–800–2–05 ಗೋವಾ ಸ್ವಾತಂತ್ರ್ಯ ಹೋರಾಟಗಾರರಿಗೆ ಪಿಂಚಣಿ"ರ ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 587

**ಆಲಿಸ್ ಗೊನ್ಸಾಲ್ವಿಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ರಾಜಕೀಯ ವಿಶ್ರಾಂತಿ ವೇತನ)

ವಸತಿ ಸಚಿವಾಲಯ

ಸಂಖ್ಯೆ: ವಇ 60 ಕೊಮಂಲೆ 2005 (ಭಾ), ಬೆಂಗಳೂರು, ದಿನಾಂಕ 31ನೇ ಮಾರ್ಚ್ 2008

ತಿದ್ದುಪಡಿ

ವಿಷಯ : ಕೇಂದ್ರ ಪುರಸ್ಕೃತ ನರ್ಮ್ ಯೋಜನೆಯಡಿ ಸಮಗ್ರ ವಸತಿ ಮತ್ತು ಕೊಳಚೆ ಅಭಿವೃದ್ಧಿ ಯೋಜನೆ (ಐಹೆಚ್‌ಎಸ್‌ಡಿಪಿ) ಅನುಷ್ಠಾನ–ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನದ ಬಿಡುಗಡೆ ಬಗ್ಗೆ.

ಉಲ್ಲೇಖ : 1. ಸರ್ಕಾರದ ಆದೇಶ ಸಂಖ್ಯೆ: ವಇ 60 ಕೊಮಂಲೆ 2005 (ಭಾ), ದಿನಾಂಕ 27–3–2008.

2. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 208 ಬಿಆರ್‌ಎಸ್ 07, ಬೆಂಗಳೂರು ದಿನಾಂಕ 9–10–2007.

ಸರ್ಕಾರದ ಆದೇಶ ಸಂಖ್ಯೆ: ವಇ 60 ಕೊಮಂಲೆ 2005(ಭಾ) ದಿನಾಂಕ 27–3–2008ರ ಆದೇಶದ 12ನೇ ಸಾಲಿನಲ್ಲಿ ರೂ. 1194.68 ಲಕ್ಷಗಳು ಎಂದು ಆಗಿದ್ದು, ಉಲ್ಲೇಖ 2ರ ಆರ್ಥಿಕ ಇಲಾಖೆಯ ಆದೇಶದನ್ವಯ ಈಗಾಗಲೇ ಬಿಡುಗಡೆಗೊಳಿಸಲಾಗಿರುವ ಹೆಚ್ಚುವರಿ ಅನುದಾನ ರೂ. 14.94 ಲಕ್ಷಗಳ ಮೊತ್ತವನ್ನು ರೂ. 1194.68ರಲ್ಲಿ ಕಳೆದರೆ ಉಳಿಕೆ ಮೊತ್ತ ರೂ. 1179.74 ಲಕ್ಷ ಆಗುತ್ತದೆ. ಆದಕಾರಣ, ಕೇಂದ್ರ ಮತ್ತು ರಾಜ್ಯದ ಪಾಲು ಸೇರಿ ಒಟ್ಟಾರೆ ರೂ. 1179.74 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಭಾರತ ಸರ್ಕಾರದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 589

**ಎನ್. ಪಾರ್ವತಿ**

ಪೀಠಾಧಿಕಾರಿ–4 (ಪ್ರ)

ವಸತಿ ಇಲಾಖೆ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

ಸಂಖ್ಯೆ: ಗ್ರಾಅಪ: 17: ಪಘಯೋ: 2007 (ಭಾ 1) ಬೆಂಗಳೂರು, ದಿನಾಂಕ 14ನೇ ಮಾರ್ಚ್ 2008

ತಿದ್ದುಪಡಿ ಆದೇಶ

2007–08ನೇ ಸಾಲಿಗೆ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದಡಿ ವಿಶೇಷ ಯೋಜನೆಗಳಿಗಾಗಿ ಹಾಸನ, ಉತ್ತರ ಕನ್ನಡ ಹಾಗೂ ಶಿವಮೊಗ್ಗ ಜಿಲ್ಲಾ ಪಂಚಾಯತಿಗಳಿಗೆ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ ದಿನಾಂಕ 20–2–2008ರಂದು ಹೊರಡಿಸಿರುವ ಸರ್ಕಾರದ ಸಮಸಂಖ್ಯೆಯ ಆದೇಶದ ಪುಟ ಸಂಖ್ಯೆ: 2ರ ನಿಬಂಧನೆ ಸಂಖ್ಯೆ: 5ರಲ್ಲಿ ನಮೂದಾಗಿರುವ 2006–07 (ಯೋಜನೆ) ಎಂಬುದರ ಬದಲಾಗಿ 2007–08 (ಯೋಜನೆ) ಎಂದು ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 510

**ಸಿ.ಎಂ. ಶಿರೋಳ್**

ನಿರ್ದೇಶಕರು,

ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ,

ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**HEALTH AND FAMILY WELFARE SECRETARIAT**

**Sub :** Constitution of State Council on AIDS-reg:

**Read :** File No. K.A.P. /AIDS/IEC/90/2007-08.

**Preamble:**

National AIDS Control Programme Phase-III (NACP-III) has identified mainstreaming Advocacy and Social Mobilisation as its key priorities. The new IEC operational guidelines provide a roadmap towards more effective and objectives.

Mainstreaming is a strategy to engage different sectors in HIV/AIDS response. The Government of Karnataka in collaboration with different ministries of Government of India, Corporate/ Business and industrial sector and Civil Society groups will be important partners in the process of Mainstreaming.

Advocacy means influencing other prople, building support, promoting commitment to an issue and directing decision makers towards solution.

Social Mobilisation will bring together different intersectional partners to determine the felt needs and raise awareness and demand with emphasis on community participation. Both Advocacy and social

Mobilisation are to be achieved through different levels of interaction with all sections of society, organizations and clubs and the media.

A National Council on AIDS chaired by the Prime Minister has been set-up at the Centre to review mainstreaming by involving different ministries, private sector organizations and CSOs.

Similarly, State Council on AIDS needs to be constituted at State level. As per guidelines it needs to be chaired by the Chief Minister / Health Minister or Chief Secretary, Government of Karnataka.

**The Overall purpose of the State Council on AIDS would be to:**

1. Provide policy direction to the HIV and AIDS programme in the State.
2. Demonstrate commitment at the highest level to address the Challenges of HIV/AIDS through a multi-sectoral response.
3. Catalyse the involvement of public and private sector stakeholders in a statewide response to HIV through a framework for Mainstreaming HIV/AIDS into their ongoing work.

Government finds it necessary to constitute a State Council on AIDS with the Chief Secretary as the Chairperson and various department with community outreach as members.

**Government Order No. HFW 10 FPS 2008, Bangalore, Dated 4th March 2008**

Under the circumstances explained in the preamble, Government are pleased to constitute, with immediate effect, a State Council on AIDS to be chaired be the Chief Secretary to provide leadership at the highest level for a multi-sectoral response to combat HIV and AIDS in the State.

| | | |
|---|---|---|
| 1. | Chief Secretary | : Chairperson |
| 2. | ACS and Development Commissioner | : Vice Chairperson |
| 3. | Secretary, Department of Health & Family Welfare | : Convenor |
| 4. | Project Director, KSAPS | : co-Convenor |
| 5. | Secretary, Labour Department | : Member |
| 6. | Secretary, Social Welfare Department | : Member |
| 7. | Secretary, Education Department | : Member |
| 8. | Secretary, Rural Development & Panchayat Raj | : Member |
| 9. | Secretary, Urban Development & Department | : Member |
| 10. | Secretary, Tourism Department | : Member |
| 11. | Secretary, Youth Services & Sports Department | : Member |
| 12. | Secretary, Women and Child Development Department | : Member |
| 13. | Secretary, Home Department | : Member |
| 14. | Secretary, Information and Publicity Department | : Member |
| 15. | Director General & Inspector General of Police | : Member |
| 16. | Additional Director General of Police (Training) | : Member |
| 17. | Chairman, Inter-Media Publicity Co-ordination Committee, Ministry of Information and Broadcasting Government of India, (Karnataka Chapter) | : Member |
| 18. | Three to five member from civil society and Individual/ organizations having Expertise in HIV/AIDS | : Member |

The State Council on AIDS Should meet on a bi-annual basis to review the actions taken on Mainstreaming advocacy and Social Mobilisatation as well as to discus and direct the next steps for action.

By order and in the name of the President of India,

PR. 434

**M. VISHWANATH**

Under Secretary to Government I/C,

Health and Family Welfare Department.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕನ್ನಡ ಭವನದ ಸೇವಾ ತೆರಿಗೆ ಹಾಗೂ ಉಪಕರಣಗಳನ್ನು ಪಾವತಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 46 ಸ್ವೀಮರ 2007, ದಿನಾಂಕ 27–4–2007.

2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಸನಿ/ಕಭ/59/2007–08, ದಿ: 20–12–2007.

**ಪ್ರಸ್ತಾವನೆ :**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2007–08ನೇ ಸಾಲಿನ ಯೋಜನಾ ಕಾರ್ಯಕ್ರಮಗಳಿಗೆ ಮಂಜೂರಾತಿ ನೀಡಿ ಹೊರಡಿಸಲ್ಪಟ್ಟ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕನ್ನಡ ಭವನ ಹಾಗೂ ರವೀಂದ್ರ ಕಲಾಕ್ಷೇತ್ರದ ಸ್ವಚ್ಛತೆ, ನಿರ್ವಹಣೆ, ಭದ್ರತೆ, ನವೀಕರಣಕ್ಕಾಗಿ ರೂ. 80 ಲಕ್ಷಗಳನ್ನು ನಿಗದಿಪಡಿಸಲಾಗಿತ್ತು. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ಅವರ ಪತ್ರದಲ್ಲಿ 1–4–2005ರಿಂದ ಅನ್ವಯವಾಗುವಂತೆ ಕನ್ನಡ ಭವನದ ಸೇವಾ ತೆರಿಗೆ ರೂ. 3,37,670/– ಹಾಗೂ ಉಪಕರ ರೂ. 1,14,808/–ಗಳಾಗಿದ್ದು ಒಟ್ಟು ರೂ. 4,52,478/– ಗಳನ್ನು ಪಾವತಿ ಮಾಡುವಂತೆ ಸಹಕಂದಾಯಾಧಿಕಾರಿ, ಚಾಮರಾಜಪೇಟೆ ವಲಯ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಅವರು ತಿಳಿಸಿದ್ದು ಅದರಂತೆ ಪಾವತಿ ಮಾಡಲು ಆದೇಶ ಹೊರಡಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 236 ಕಸನಿ 2007, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2008.**

ಕನ್ನಡ ಭವನಕ್ಕೆ ದಿನಾಂಕ 1–4–2005ರಿಂದ ಅನ್ವಯವಾಗುವಂತೆ ಸೇವಾ ತೆರಿಗೆ ರೂ. 3,37,670/– ಹಾಗೂ ಉಪಕರ ರೂ. 1,14,808/– ಒಟ್ಟು ರೂ. 4,52,478/– ಗಳನ್ನು (ರೂಪಾಯಿ ನಾಲ್ಕು ಲಕ್ಷದ ಐವತ್ತೆರಡು ಸಾವಿರದ ನಾಲ್ಕು ನೂರ ಎಪ್ಪತ್ತೆಂಟು ಮಾತ್ರ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಪಾವತಿ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4202–04–800–1–01–139 (ಯೋಜನೆ) ಇದರಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಅಂತರಿಕ ಆರ್ಥಿಕ ಸಲಹೆಗಾರರೊಡನೆ ಸಮಾಲೋಚಿಸಿದ ನಂತರ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಈ ಆದೇಶವನ್ನು ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 447

**ಪೆಮ್ಮಂಡ ಎಸ್. ರಾಣಿ**

ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀಮತಿ ಸವಿತಾ ಎಂ. ಶಿಗ್ಲಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಂಡರಗಿ ಇವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ನಂ. ಲಾ 193 ಪಿಪಿಇ 2003, ದಿನಾಂಕ 6–5–2004.

2. ಸರ್ಕಾರದ ಆದೇಶ ನಂ. ಒಇ 319 ಪಿಪಿಇ 2007, ದಿನಾಂಕ 10–12–2007.

3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ–1/ 40/ 2006–07, ದಿನಾಂಕ 8/11–1–2008.

**ಪ್ರಸ್ತಾವನೆ :**

ಶ್ರೀಮತಿ ಸವಿತಾ ಎಂ. ಶಿಗ್ಲಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಂಡರಗಿ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 6–5–2004ರ (ಕ್ರ.ಸಂ.15) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡು, ದಿನಾಂಕ 20–5–2004ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಅಧಿಕಾರಿಯು ಎರಡು ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗದೆ ಇದ್ದುದರಿಂದ ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ಅವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 21–5–2006 ರಿಂದ 15–3–2007ರವರೆಗೆ ವಿಸ್ತರಿಸಲಾಗಿತ್ತು. ತದನಂತರ ಸದರಿ ಅಧಿಕಾರಿಯವರು ಅಂತಿಮವಾಗಿ ಇಲಾಖೆಯ ಪರೀಕ್ಷೆಗಳಲ್ಲಿ ಉತ್ತೀರ್ಣತೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ

ಕನ್ನಡವನ್ನು ಒಂದು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ. ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2004–05ನೇ ಸಾಲಿನಿಂದ 2006–07ನೇ ಸಾಲುಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ. ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇವರ ಮೇಲೆ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ. ಆದುದರಿಂದ, ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು 1977ರ ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ)ರ ಅನ್ವಯ ದಿನಾಂಕ 16–3–2007ರಂದು ತೃಪ್ತಿಕರವಾಗಿ ಪೂರೈಸಿರುವುದಾಗಿ ಘೋಷಿಸುವಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಮೇಲೆ (3)ರಲ್ಲಿ ಓದಲಾದ ಪತ್ರಗಳಲ್ಲಿ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 40 ಪಿಪಿಇ 2008, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು 1977ರ ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ)ರ ಅನ್ವಯ ಶ್ರೀಮತಿ ಸವಿತಾ ಎಂ. ಶಿಗ್ಲಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಂಡರಗಿ ಇವರು ದಿನಾಂಕ 16–3–2007ರಂದು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 339

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಮತ್ತು ಅಭಿಯೋಗ)

**ಉನ್ನತ ಶಿಕ್ಷಣ ಸಚಿವಾಲಯ**

**ಕ್ರಮಾಂಕ ಇಡಿ 115 ಯುಎಸ್‌ವಿ 2006, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2008.**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ: ಇಡಿ 115 ಯುಎಸ್‌ವಿ 2006, ದಿನಾಂಕ 12–2–2008ರ ಆದೇಶ ಭಾಗದ ಷರತ್ತು ಸಂಖ್ಯೆ (5)ರಲ್ಲಿ ಪ್ರಸ್ತುತ ಇರುವ ವಾಕ್ಯವೃಂದಕ್ಕೆ ಬದಲಾಗಿ ಈ ಕೆಳಗಿನಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

"(5) ಸದರಿ ಕಾಲೇಜಿಗೆ ಸಂಬಂಧಿಸಿದಂತೆ ಸರ್ಕಾರವು ಈಗಾಗಲೇ ನೀಡುತ್ತಿರುವ ವೇತನಾನುದಾನದ ಮೊತ್ತವನ್ನು ವಿಶ್ವವಿದ್ಯಾಲಯದ ಬ್ಲಾಕ್ ಗ್ರಾಂಟಿನ ಮೊತ್ತಕ್ಕೆ ವಿಲೀನಗೊಳಿಸಲು ಅನುಮೋದಿಸಲಾಗಿದೆ."

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 446

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

**ಒಳಾಡಳಿತ ಸಚಿವಾಲಯ**

**ಸಂಖ್ಯೆ ಒಇ 41 ಪೊಸಿಅ 2008, ಬೆಂಗಳೂರು, ದಿನಾಂಕ 5ನೇ ಫೆಬ್ರವರಿ 2008**

**ADDENDUM**

ಸರ್ಕಾರದ ಆದೇಶ ಸಂಖ್ಯೆ: ಒಇ 66 ಪೊಸಿಅ 2007, ದಿ: 12–6–2007ರಲ್ಲಿ ಶ್ರೀ ವೈ.ಆರ್. ಸೈದಾಪೂರ, ಎ.ಹೆಚ್.ಸಿ.–137ರವರ ಆದೇಶದಲ್ಲಿ, ಈ ಕೆಳಕಂಡ ಅಂಶವನ್ನು ಕ್ರಮ ಸಂಖ್ಯೆ–4ರಲ್ಲಿ ಸದರಿಯವರ ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು (Dies Non) ಎಂದು ಪರಿಗಣಿಸಿ ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 276

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)